# ಮಾನವ ಜೀವನ ಮತ್ತು ಪರಲೋಕ

ಲೇಖಕರು
ಮುಹಮ್ಮದ್ ಝೈನುಲ್ ಆಬಿದೀನ್ ಮನ್ಸೂರಿ
ಡಾ। ಮುಹಮ್ಮದ್ ಅಹ್ಮದ್
ಡಾ। ಸೈಯದ್ ಶಾಹಿದ್ ಅಲೀ

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಮರಣವೆಂಬುದು ಒಂದು ವಾಸ್ತವಿಕತೆಯಾಗಿದೆ. ಈ ಲೋಕದಲ್ಲಿ ಜನ್ಮವೆತ್ತ ಪ್ರತಿಯೊಂದು ಜೀವಿ ಒಂದು ದಿನ ಸಾಯಬೇಕಾಗಿದೆ. ಅದು ಮನುಷ್ಯನಾಗಿರಬಹುದು. ಪ್ರಾಣಿ-ಪಕ್ಷಿಗಳಾಗಿರಬಹುದು. ಗಿಡ-ಮರಗಳಾಗಿರಬಹುದು. ಎಲ್ಲಕ್ಕೂ ಒಂದು ಅಂತ್ಯವಿದೆ. ಈ ಪೈಕಿ ಮಾನವನಿಗೆ ಬುದ್ಧಿ-ವಿವೇಕವನ್ನು ನೀಡಿ ಅವನನ್ನು ಹೊಣೆಗಾರನಾಗಿ ಮಾಡಲಾಗಿದೆ. ಇತರ ಜೀವಿಗಳಿಗೆ ಆ ಸಾಮರ್ಥ್ಯ ನೀಡಲಾಗಿಲ್ಲ ಆದ್ದರಿಂದ ಅವುಗಳಿಗೆ ಜವಾಬ್ದಾರಿಯಿಲ್ಲ, ಈ ಲೋಕದ ನಂತರ ಒಂದು ಲೋಕ ಬರಲಿದೆ. ಅದುವೇ ಮರಣಾನಂತರದ ಪರಲೋಕ.

ಮರಣಾನಂತರ ಜೀವನವಿದೆಯೇ? ಇದ್ದರೆ ಅದರ ಸ್ವರೂಪವೇನು? ಇದನ್ನು ನಾವು ಯಾರೂ ಕಂಡಿಲ್ಲ, ಅನುಭವಿಸಿಯೂ ಇಲ್ಲ, ಅಲ್ಲಿನ ಶಬ್ದವನ್ನೂ ಕೇಳಿಯೂ ಇಲ್ಲ. ಪರಲೋಕ ಜೀವನದ ಕುರಿತು ಬೇರೆ ಬೇರೆ ದೃಷ್ಟಿಕೋನಗಳನ್ನು ಹೊಂದಿದವರಿದ್ದಾರೆ. ಮರಣಾನಂತರ ಜೀವನವೇ ಇಲ್ಲ, ಈ ಲೋಕವೇ ಸರ್ವಸ್ವ, ಇಲ್ಲಿನ ಸುಖಭೋಗಗಳನ್ನು ಸಾಧ್ಯವಾದಷ್ಟು ಸವಿಯಬೇಕು ಎಂಬುದು ಕೆಲವರ ಅಭಿಪ್ರಾಯವಾದರೆ, ಇನ್ನೂ ಕೆಲವರು ಮನುಷ್ಯ ಸತ್ತು ಸಂಪೂರ್ಣ ನಾಸ್ತಿಯಾಗುವುದಿಲ್ಲ, ಅವನು ಮಾಡಿದ ಉತ್ತಮ ಅಥವಾ ಕೆಟ್ಟ ಕರ್ಮಗಳಿಗಾಗಿ ಅವನು ಪದೇ ಪದೇ ಜನ್ಮ ತಾಳಿ ಬರುತ್ತಾನೆ. ಅಂದರೆ ಪುನರ್ಜನ್ಮ ಸಿದ್ಧಾಂತ.

ಇನ್ನೊಂದು ದೃಷ್ಟಿಕೋನದ ಪ್ರಕಾರ, ಈ ಲೋಕದ ಜೀವನವೇ ಸರ್ವಸ್ವವಲ್ಲ, ಸುದೀರ್ಘವಾದ ಒಂದು ಜೀವನದ ಒಂದು ಹಂತ ಮಾತ್ರ. ಮರಣವು ಈ ಲೋಕದಿಂದ ಪರಲೋಕಕ್ಕೆ ಹೋಗುವ ಬಾಗಿಲಾಗಿದೆ. ಸತ್ತು ಹೋದ ಮನುಷ್ಯರೆಲ್ಲರೂ ಒಂದು ದಿನ ದೇವನ ಮುಂದೆ ಹಾಜರುಗೊಳಿಸಲ್ಪಡಲಿದ್ದಾರೆ. ಅಲ್ಲಿ ಅವನ ಪ್ರತಿಯೊಂದು ಕರ್ಮದ ವಿಚಾರಣೆ ನಡೆಯಲಿದೆ. ಅದು ಅನಶ್ವರವಾದ ಲೋಕವಾಗಿದೆ. ಅಲ್ಲಿನ ಜೀವನವೂ ಶಾಶ್ವತ. ಇದು ಎಲ್ಲ ಕಾಲಗಳಲ್ಲಿ ಜನರಿಗೆ ಮಾರ್ಗದರ್ಶಕರಾಗಿ ಬಂದ ಪ್ರವಾದಿಗಳ ಶಿಕ್ಷಣವಾಗಿದೆ.

ಮಾನವ ಜೀವನಕ್ಕೂ ಪರಲೋಕಕ್ಕೂ ನೇರವಾದ ಸಂಬಂಧವಿದೆ. ಆದರೆ ಹೆಚ್ಚಿನವರು ಈ ಬಗ್ಗೆ ನಿರ್ಲಕ್ಷ್ಯರಾಗಿದ್ದಾರೆ. 'ಮಾನವ ಜೀವನ ಮತ್ತು ಪರಲೋಕ' ಎಂಬ ಈ ಕೃತಿಯಲ್ಲಿ ಅದರ ಬಗ್ಗೆಯೇ ವಿಶ್ಲೇಷಿಸಲಾಗಿದೆ. ಮುಹಮ್ಮದ್ ಝ್ಯುನುಲ್ ಆಬಿದೀನ್ ಮನ್ಸೂರಿ, ಡಾ। ಮುಹಮ್ಮದ್ ಅಹ್ಮದ್ ಹಾಗೂ ಡಾ। ಸೈಯದ್ ಶಾಹಿದ್ ಅಲೀ ಎಂಬ ಮೂವರು ಗಣ್ಯರು ಬರೆದ ಹಿಂದಿ ಲೇಖನಗಳ ಸಮಾಹಾರವಿದು. ಇದರಲ್ಲಿ ಪರಲೋಕ ಜೀವನಕ್ಕೆ ಸಂಬಂಧಿಸಿದ ಎಲ್ಲ ಅಂಶಗಳನ್ನೂ ಚರ್ಚಿಸಲಾಗಿದೆ. 'ಅನುಪಮ' ಮಹಿಳಾ ಮಾಸಿಕದ ಉಪಸಂಪಾದಕಿ ಸಬೀಹಾ ಫಾತಿಮಾ ಇದನ್ನು ಕನ್ನಡಕ್ಕೆ ಸುಂದರವಾಗಿ ಅನುವಾದಿಸಿದ್ದಾರೆ. ಜಮಾಅತೆ ಇಸ್ಲಾಮೀ ಹಿಂದ್‌ನ ಕಾರ್ಯದರ್ಶಿ ಮೌ। ಮುಹಮ್ಮದ್ ಇಕ್ಬಾಲ್ ಮುಲ್ಲಾರ ಮುನ್ನುಡಿ ಈ ಕೃತಿಗೆ ಇನ್ನಷ್ಟು ಮೆರುಗು ನೀಡಿದೆ. ಅಧ್ಯಯನದಿಂದ ಪರಲೋಕ ಜೀವನದ ಕುರಿತು ಗಂಭೀರವಾಗಿ ಆಲೋಚಿಸಲು ಪ್ರೇರಕವಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಮುನ್ನುಡಿ

ಮರಣ ಎಂಬುದು ಮನುಷ್ಯ ನಿರಾಕರಿಸಲಾಗದ ವಾಸ್ತವಿಕತೆಯಾಗಿದೆ. ಮನುಷ್ಯ ತನ್ನ ಆತ್ಮೀಯ ಸಂಬಂಧಿಕರು ಹಾಗೂ ಗೆಳೆಯರನ್ನು ಮರಣದ ಶಯ್ಯೆಯಲ್ಲಿ ನೋಡುತ್ತಾನೆ. ಆದರೆ ಮರಣದಿಂದ ಅವರನ್ನು ರಕ್ಷಿಸಲು ಅವನಿಂದ ಸಾಧ್ಯವಾಗುವುದಿಲ್ಲ. ಇದೆಲ್ಲವನ್ನು ನೋಡಿ ತಾನೂ ಒಂದು ದಿನ ಸಾಯಲಿದ್ದೇನೆ ಮತ್ತು ಶಾಶ್ವತವಾಗಿ ಈ ಜಗತ್ತಿಗೆ ವಿದಾಯ ಹೇಳಲಿದ್ದೇನೆ ಎಂಬುದು ಅವನಿಗೆ ನೆನಪಾಗುತ್ತದೆ.

ಈ ಜೀವನ ಎಂದರೇನು? ಈ ಜೀವನದ ಸೃಷ್ಟಿಕರ್ತ ಯಾರು? ಅವನು ನಮ್ಮಿಂದ ಏನನ್ನು ಬಯಸುತ್ತಾನೆ? ಮರಣವೆಂದರೇನು? ಮರಣದ ಬಳಿಕ ಒಂದು ಜೀವನವಿದೆಯೇ ಅಥವಾ ಇಲ್ಲವೇ? ಒಂದು ವೇಳೆ ಇದ್ದರೆ, ಆ ಮರಣಾನಂತರದ ಪರಲೋಕ ಜೀವನದಲ್ಲಿ ಮನುಷ್ಯ ಯಶಸ್ವಿಯಾಗಬೇಕಾದರೆ ಈ ಜೀವನದಲ್ಲಿ ಅವನು ಏನು ಮಾಡಬೇಕು? ಒಂದು ವೇಳೆ ಮರಣದ ಬಳಿಕ ಇನ್ನೊಂದು ಜೀವನ ಇಲ್ಲ ಎಂದಾದರೆ, ಮರಣದೊಂದಿಗೆ ಮನುಷ್ಯನ ಜೀವನವು ಕೊನೆಗೊಳ್ಳುತ್ತದೆಯೇ? ಮನುಷ್ಯನ ಮನಸ್ಸಿನಲ್ಲಿ ಮೂಡುವ ಈ ಕೆಲವು ಪ್ರಶ್ನೆಗಳಿಗೆ ಸೂಕ್ತ ಉತ್ತರ ಲಭಿಸಬೇಕಾಗಿದೆ.

ದಾರ್ಶನಿಕರು ಮತ್ತು ವಿದ್ವಾಂಸರು ಈ ಪ್ರಶ್ನೆಗಳ ಬಗ್ಗೆ ಎಲ್ಲ ಕಾಲಗಳಲ್ಲೂ ಚಿಂತನೆ ನಡೆಸಿದ್ದಾರೆ. ವಿಶೇಷವಾಗಿ ಈ ಜೀವನದ ಕೊನೆಯಲ್ಲಿ ಬರುವ ಮರಣದ ಬಗ್ಗೆ ಅನೇಕ ಧರ್ಮಗಳು ಬೆಳಕು ಚೆಲ್ಲಿವೆ. ಅವುಗಳು ಈ ಕೆಳಗಿನಂತಿವೆ.

1. ಈ ಜೀವನವೇ ನಿಜವಾದ ಮತ್ತು ಕೊನೆಯ ಜೀವನವಾಗಿದೆ. ಈ ಜೀವನದ ಬಳಿಕ ಇನ್ನೊಂದು ಜೀವನವಿಲ್ಲ. ಆದುದರಿಂದ ಇಲ್ಲಿನ ಯಶಸ್ಸಿಗಾಗಿ ಮನುಷ್ಯ ಪ್ರಯತ್ನಿಸಬೇಕು. ಭೋಗ ವಿಲಾಸ ಮತ್ತು ಐಷಾರಾಮಗಳೇ ಈ ಜೀವನದ ಉದ್ದೇಶವಾಗಿದೆ.

2. ಕೆಲವರ ಪ್ರಕಾರ, ಈ ಜೀವನದ ಬಳಿಕ ಇನ್ನೊಂದು ಜೀವನವಿದೆ. ಅದನ್ನು ಪರಲೋಕ ಎನ್ನಲಾಗುತ್ತದೆ. ಸ್ವರ್ಗ ನರಕಗಳೂ ಇರುವುದು ಸತ್ಯ. ಪರಲೋಕದಲ್ಲಿ ಸ್ವರ್ಗ ಸಿಗಬೇಕಾದರೆ ಮನುಷ್ಯ, ಈ ಜೀವನದಲ್ಲಿ ದೇವಪುತ್ರನ ಮೇಲೆ ವಿಶ್ವಾಸವಿರಿಸಬೇಕು ಮತ್ತು ಮನುಷ್ಯ ಹುಟ್ಟು ಪಾಪಿ ಎಂಬುದನ್ನು ಒಪ್ಪಿಕೊಳ್ಳಬೇಕು. ದೇವಪುತ್ರನು ಮನುಷ್ಯರ ಪಾಪ ಪರಿಹಾರಕ್ಕಾಗಿ ಶಿಲುಬೆಗೇರಿದನು.

3. ಇನ್ನು ಕೆಲವು ವ್ಯಕ್ತಿಗಳ ನಂಬಿಕೆಯಂತೆ, ಮರಣದೊಂದಿಗೆ ಮನುಷ್ಯನ ಜೀವನವು ಕೊನೆಗೊಳ್ಳುವುದಿಲ್ಲ, ಅವನು ತನ್ನ ಕೆಟ್ಟ ಹಾಗೂ ಒಳ್ಳೆಯ ಕರ್ಮಗಳ ಪರಿಣಾಮವನ್ನು ಅನುಭವಿಸಲು ಪುನಃ ಪುನಃ ಜನ್ಮ ಪಡೆಯುತ್ತಾನೆ. ಕ್ರಿಮಿ-ಕೀಟ, ಗಿಡ-ಮರ, ಪಶು-ಪಕ್ಷಿ ಅಥವಾ ಕೆಲವೊಮ್ಮೆ ಮನುಷ್ಯನ ಆತ್ಮದ ರೂಪದಲ್ಲಿ ಎಲ್ಲಿಯವರೆಗೆಂದರೆ 84ಲಕ್ಷ ಯೋನಿಯನ್ನು ಸುತ್ತಿದ ಬಳಿಕ ಅವನು ಜೀವನದಿಂದ ಮುಕ್ತಿಯನ್ನು ಪಡೆಯುತ್ತಾನೆ.

4. ಒಂದು ನಂಬಿಕೆಯ ಪ್ರಕಾರ, ಮನುಷ್ಯನ ಲೌಕಿಕ ಜೀವನವು ಒಂದು ಪರೀಕ್ಷೆಯಾಗಿದೆ. ಮನುಷ್ಯ ಮತ್ತು ಸಮಸ್ತ ಜೀವ-ಜಂತು, ಪಶು-ಪಕ್ಷಿ, ಸಜೀವಿ-ನಿರ್ಜೀವಿ ಎಲ್ಲವುಗಳ ಸೃಷ್ಟಿಕರ್ತ ಒಬ್ಬನೇ ಆಗಿದ್ದಾನೆ. ದೇವನು ಮನುಷ್ಯನಿಗೆ ಬುದ್ಧಿ ಮತ್ತು ವಿವೇಕವನ್ನು ದಯಪಾಲಿಸಿದ್ದಾನೆ. ಏಕೆಂದರೆ ಅವನು ಚಿಂತಿಸಿ, ಆಲೋಚಿಸಿ ತನ್ನ ಜೀವನವನ್ನು ಸಾಗಿಸಬೇಕಾಗಿದೆ. ಈ ಜೀವನದ ಬಳಿಕ ಶಾಶ್ವತವಾದ ಜೀವನವೊಂದಿದೆ. ಯಾರು ದೇವನನ್ನು ಒಡೆಯ, ಪರಿಪಾಲಕ, ಸೃಷ್ಟಿಕರ್ತ ಎಂದು ತಿಳಿದು ಅವನು ತೋರಿಸಿದ ಮಾರ್ಗದಲ್ಲಿ ಜೀವನ ನಡೆಸುತ್ತಾರೋ ಅವರು ಮರಣದ ಬಳಿಕ ಸ್ವರ್ಗಕ್ಕೆ ಅರ್ಹರಾಗುತ್ತಾರೆ. ಇದು ಮನುಷ್ಯನ ಅತಿದೊಡ್ಡ ವಿಜಯವಾಗಿದೆ. ಯಾರು ದೇವನನ್ನು ನಂಬಲಿಲ್ಲವೋ, ಅವನು ತೋರಿಸಿದ ಮಾರ್ಗದಲ್ಲಿ ನಡೆಯಲಿಲ್ಲವೋ, ದೇವೇಚ್ಛೆಗೆ ವಿರುದ್ಧವಾಗಿ ನಡೆದರೋ ಅಂತಹವರು ನರಕವಾಸಿಗಳಾಗುತ್ತಾರೆ. ಅವರು ಭೀಕರ ನರಕಾಗ್ನಿಯಲ್ಲಿ ಸದಾ ಉರಿಯಬೇಕಾಗಿ ಬರುವುದು. ಇದು ಅವರ ಪಾಲಿಗೆ ಬಹಳ ದೊಡ್ಡ ನಷ್ಟವಾಗಿರುವುದು. ಮನುಷ್ಯ ಈ ಲೌಕಿಕ ಜೀವನದಲ್ಲಿ ಮಾಡಿದ ಕರ್ಮಗಳಿಗೆ ದೇವನ ಮುಂದೆ ಜವಾಬ್ದಾರನಾಗಿದ್ದಾನೆ ಮತ್ತು ಈ ಬಗ್ಗೆ ದೇವನು ಅವನನ್ನು ಪ್ರಶ್ನಿಸುವನು.

ಈ ಮೇಲಿನ ವಿಚಾರಧಾರೆಗಳು ಒಂದು ಇನ್ನೊಂದಕ್ಕಿಂತ ಭಿನ್ನವಾಗಿರುವುದು ಮಾತ್ರವಲ್ಲ, ತದ್ವಿರುದ್ಧವೂ ಆಗಿವೆ. ಒಂದೇ ಕಾಲಕ್ಕೆ ಈ ಎಲ್ಲ ವಿಚಾರಧಾರೆಗಳು ಸರಿಯಾಗಿರುವುದು ಸಾಧ್ಯವೇ? ಇವುಗಳ ಪೈಕಿ ಯಾವುದು ಸತ್ಯ ಮತ್ತು ಸತ್ಯಕ್ಕೆ ಸಮೀಪವಾಗಿದೆ? ಇದರ ಬಗ್ಗೆ ಸರಿಯಾದ ಜ್ಞಾನವನ್ನು ಗಳಿಸುವುದು ಮನುಷ್ಯನ ಜವಾಬ್ದಾರಿಯಾಗಿದೆ.

ಮರಣಾನಂತರದ ಜೀವನದ ಕುರಿತು ಕೆಲವು ಲೇಖನಗಳನ್ನು ಈ ಪುಸ್ತಕದಲ್ಲಿ ಒಟ್ಟು ಸೇರಿಸಲಾಗಿದೆ. ಈ ಮೂಲಕ ಜನರಿಗೆ ಸರಿಯಾದ ಮಾರ್ಗದರ್ಶನ ಸಿಗಲಿ ಎಂಬುದು ಇದರ ಮುಖ್ಯ ಉದ್ದೇಶವಾಗಿದೆ. ಈ ಲೋಕದಲ್ಲಿ ಮನುಷ್ಯನಿಗೆ ಒಂದು ಬಾರಿ ಮಾತ್ರ ಜೀವನ ಸಿಗುತ್ತದೆ. ಆದುದರಿಂದ ಮರಣಾನಂತರದ ಜೀವನದ ಬಗ್ಗೆ ನಾವು ಬಹಳ ಆಲೋಚಿಸಿ ನಿರ್ಣಯ ತೆಗೆದುಕೊಳ್ಳಬೇಕು. ಇಂದಿನ ತಪ್ಪು ನಿರ್ಧಾರ ನಾಳೆ ನರಕದ ಭೀಕರ ಅಗ್ನಿ ಶಿಕ್ಷೆಯ ರೂಪದಲ್ಲಿ ಮುಂದೆ ಬಂದರೆ ಅದೆಷ್ಟು ಭಯಾನಕ ಅವಸ್ಥೆಯಾಗಬಹುದು.

ಯಾರು ಮರಣದ ಬಳಿಕದ ಜೀವನವನ್ನು ಕಣ್ಣಾರೆ ನೋಡದೆ ಒಪ್ಪಿಕೊಳ್ಳಲು ತಯಾರಿರುವುದಿಲ್ಲವೋ ಅವರು ತಮ್ಮ ವಿಶ್ವಾಸದೊಂದಿಗೆ ಮರಣದ ಬಳಿಕ ಜೀವನವಿದೆಯೋ

ಇಲ್ಲವೋ ಎಂದು ನನಗೆ ತಿಳಿದಿಲ್ಲ ಎಂದು ಮಾತ್ರ ಹೇಳಬಹುದು. ಆದರೆ ಮರಣದ ಬಳಿಕ ಜೀವನವೇ ಇಲ್ಲ ಎಂದು ಹೇಳಲು ಯಾರಿಂದಲೂ ಸಾಧ್ಯವಿಲ್ಲ. ಯಾವುದೇ ವಿಷಯದ ಸತ್ಯಾಸತ್ಯತೆಯನ್ನು ತಿಳಿಯಲು ಕಣ್ಣಾರೆ ನೋಡುವುದು ಮಾತ್ರ ಒಂದು ಮಾರ್ಗವಲ್ಲ. ಇಂದಿನವರೆಗೆ ಮರಣ ಹೊಂದಿದವರಾರೂ ತಿರುಗಿ ಬಂದು ಮರಣದ ಬಳಿಕ ಒಂದು ಜೀವನವಿದೆ, ಸ್ವರ್ಗ-ನರಕ ಇದೆ ಎಂದು ಹೇಳಿಲ್ಲ. ಮಾತ್ರವಲ್ಲ ಮರಣದ ಬಳಿಕ ಒಂದು ಜೀವನವೇ ಇಲ್ಲ, ಸ್ವರ್ಗ-ನರಕ ಎಂಬುದೆಲ್ಲ ಸುಳ್ಳು, ನಾನು ಸ್ವತಃ ಕಣ್ಣಾರೆ ನೋಡಿದ್ದೇನೆ, ಅಂತಹದ್ದೇನೂ ಅಲ್ಲಿಲ್ಲ ಎಂದು ಕೂಡಾ ಯಾರೂ ಹೇಳಿಲ್ಲ. ಜೀವನದ ಇಷ್ಟು ಮಹತ್ವಪೂರ್ಣವಾದ ವಿಷಯದಲ್ಲಿ ನಾವು ಇಂತಹ ಪರಿಸ್ಥಿತಿಯಲ್ಲಿ ಗೊಂದಲಕ್ಕೊಳಗಾದರೆ, ಸನ್ಮಾರ್ಗದೆಡೆಗೆ ಸಾಗುವುದಾದರೂ ಹೇಗೆ?

ಕಣ್ಣಾರೆ ಕಂಡ ಬಳಿಕ ವಿಶ್ವಾಸ ತಾಳುವ ಪ್ರಯತ್ನವು ವಿಫಲವಾದ ಬಳಿಕ ಇದಕ್ಕಿರುವ ಇನ್ನೊಂದು ಮಾರ್ಗವೆಂದರೆ ನಮ್ಮ ಹುಟ್ಟು, ಈ ಜಗತ್ತಿನ ವೈಶಿಷ್ಟ್ಯಗಳು, ನಿದರ್ಶನಗಳ ಬಗ್ಗೆ ವಿಚಾರ ಮಾಡಿ ಮರಣಾನಂತರದ ಜೀವನದ ಬಗ್ಗೆ ನಮ್ಮ ನಿಲುವು ಏನೆಂದು ನಿರ್ಧರಿಸುವುದು.

ಮರಣಾನಂತರ ಜೀವನವೊಂದಿದೆ ಎಂದು ಧಾರ್ಮಿಕ, ಪೌರಾಣಿಕ ಗ್ರಂಥಗಳು, ವೇದಗಳು ಮತ್ತು ಬೈಬಲ್‌ಗಳ ಮೂಲಕ ತಿಳಿದು ಬರುತ್ತದೆ. ಸ್ವರ್ಗ-ನರಕಗಳು ವಾಸ್ತವಿಕತೆಗಳಾಗಿವೆ. ಮಹಾ ಪ್ರಳಯದ(ಕಿಯಾಮತ್) ಬಳಿಕ ಮನುಷ್ಯರೆಲ್ಲರೂ ಪುನಃ ಎದ್ದೇಳಿಸಲ್ಪಟ್ಟಾಗ ಸ್ವರ್ಗ-ನರಕಗಳನ್ನು ಕಣ್ಣಾರೆ ಕಾಣುವರು. ಇದರಲ್ಲಿ ಯಾವುದೇ ಸಂಶಯವಿಲ್ಲ. ಇಂದಿಗೆ ಸುಮಾರು 1450 ವರ್ಷಗಳ ಹಿಂದೆ ದೇವಸಂದೇಶವಾಹಕರಾದ ಪ್ರವಾದಿ ಮುಹಮ್ಮದರಿಗೆ(ಸ) ಪವಿತ್ರ ಕುರ್‌ಆನ್ ಅವತೀರ್ಣಗೊಂಡಿತು. ಇದು ಅಂತಿಮ ದೇವಗ್ರಂಥವಾಗಿದೆ. ಇದರಲ್ಲಿ ಸಮಸ್ತ ಮಾನವ ಕುಲಕ್ಕೆ ಮಾರ್ಗದರ್ಶನ, ಸನ್ಮಾರ್ಗ ಮತ್ತು ಆದೇಶ-ನಿರ್ದೇಶನಗಳಿವೆ. ಇದರ ಬಳಿಕ ಮನುಷ್ಯರ ಮಾರ್ಗದರ್ಶನಕ್ಕಾಗಿ ಇನ್ನೊಂದು ಗ್ರಂಥ ಬರುವುದಿಲ್ಲ. ನಮ್ಮ ಕಣ್ಣಿಗೆ ಕಾಣಿಸದ ಸತ್ಯವನ್ನು ತಿಳಿಯಲು ಪವಿತ್ರ ಕುರ್‌ಆನಿನ ಅಧ್ಯಯನ ಮಾಡಬೇಕು. ಜಗತ್ತಿನಲ್ಲಿ ಹರಡಿರುವ ದೇವನಿದರ್ಶನಗಳ ಬಗ್ಗೆ ಪರ್ಯಾಲೋಚಿಸಬೇಕೆಂದು ಪವಿತ್ರ ಕುರ್‌ಆನ್ ಆದೇಶಿಸುತ್ತದೆ. ಮಾತ್ರವಲ್ಲದೆ, ಇದರ ಅವಶ್ಯಕತೆಯ ಬಗ್ಗೆಯೂ ತಿಳಿಸುತ್ತದೆ.

ಈ ಸತ್ಯವನ್ನು ನಿರಾಕರಿಸುವುದರಿಂದ ಯಾವ ರೀತಿಯ ನಷ್ಟವುಂಟಾಗುತ್ತದೆ ಎಂಬುದರ ಕುರಿತು ಪವಿತ್ರ ಕುರ್‌ಆನ್ ಮನುಷ್ಯನನ್ನು ಎಚ್ಚರಿಸುತ್ತದೆ. ಈ ಕಾರಣದಿಂದಾಗಿಯೇ ಬುದ್ಧಿ, ವಿವೇಕ, ಚಿಂತನೆ, ಆಲೋಚನೆ ಮಾಡುವ ಸಾಮರ್ಥ್ಯವನ್ನು ದೇವನು ಮನುಷ್ಯನಿಗೆ ಮಾತ್ರ ನೀಡಿದ್ದಾನೆ. ಮನುಷ್ಯ ತನ್ನ ಬುದ್ಧಿ, ವಿವೇಕ ಶಕ್ತಿಯನ್ನು ಉಪಯೋಗಿಸಿ ಕೇವಲ ತಿನ್ನುವ, ಕುಡಿಯುವ, ಮೋಜು ಮಾಡುವ, ತನ್ನ ಪ್ರಾಥಮಿಕ ಅವಶ್ಯಕತೆಯನ್ನು ಮಾತ್ರ ಈಡೇರಿಸುತ್ತಾನೋ ಅಥವಾ ತನ್ನ ಜೀವನದ ಮೂಲಭೂತ ಪ್ರಶ್ನೆಗಳಿಗೆ ಉತ್ತರವನ್ನು

ಕಂಡುಹಿಡಿದು ಸರಿಯಾದ ಪರಿಣಾಮದೆಡೆಗೆ ತಲುಪುವ ಬಗ್ಗೆ ಆಲೋಚಿಸುತ್ತಾನೋ ಎಂಬುದು ಮನುಷ್ಯನ ಪಾಲಿಗೆ ಬಹಳ ದೊಡ್ಡ ಪರೀಕ್ಷೆಯಾಗಿದೆ.

ಈ ಲೇಖನಗಳ ಓದುಗರೊಂದಿಗೆ ನಮ್ಮ ವಿನಂತಿಯೇನೆಂದರೆ, ಯಾವುದೇ ರೀತಿಯಲ್ಲಿ ಪೂರ್ವಗ್ರಹ ಪೀಡಿತರಾಗದೆ, ಹಳೆಯ ಆಚಾರ-ವಿಚಾರಗಳನ್ನು ಮನಸ್ಸಿನಲ್ಲಿ ತುಂಬಿಕೊಳ್ಳದೆ, ಯಾವುದೇ ದ್ವೇಷವಿಲ್ಲದೆ, ನಿಷ್ಪಕ್ಷಪಾತವಾಗಿ ಅಧ್ಯಯನ ಚಿಂತನೆ ನಡೆಸಬೇಕು. ಮರಣದ ಬಳಿಕ ಶಾಶ್ವತವಾದ ಜೀವನವಿದೆ. ಸ್ವರ್ಗ-ನರಕಗಳಿರುವುದು ಸತ್ಯ. ಆದರೆ ನಾವು ಪರಲೋಕ ಜೀವನದ ನಿರಾಕರಣೆಯಲ್ಲೇ ನಮ್ಮ ಈ ಜೀವನವನ್ನು ಕಳೆದು ಬಿಟ್ಟರೆ, ನಮ್ಮ ಅಂತಿಮ ಪರಿಣಾಮ ಏನಾಗಬಹುದೆಂದು ಆಲೋಚಿಸಿ ನೋಡಿ.

ಈ ಲೇಖನಗಳ ಅಧ್ಯಯನದ ಬಳಿಕ ಯಾರಿಗಾದರೂ ಇದರಲ್ಲಿರುವ ವಿಷಯಗಳ ಬಗ್ಗೆ ಸಹಮತವಿದ್ದರೆ, ಇಲ್ಲಿನ ಜೀವನದ ಬಗ್ಗೆ, ಮರಣದ ಬಳಿಕ ದೇವನ ಮುಂದೆ ಉತ್ತರಿಸಬೇಕಾಗಿದೆ ಎಂಬ ವಿಶ್ವಾಸವನ್ನು ಸ್ವೀಕರಿಸುವ ವಿಷಯದಲ್ಲಿ ಯಾವುದೂ ಅಡ್ಡಿಯುಂಟಾಗಬಾರದು. ವಾಸ್ತವಿಕತೆಯನ್ನು ಸ್ವೀಕರಿಸದೇ ಇರುವುದರಿಂದ ಸತ್ಯವು ಎಂದೂ ಬದಲಾಗುವುದಿಲ್ಲ, ಆದರೆ ನಿರಾಕರಣೆಯ ಪರಿಣಾಮವು ಭಯಾನಕ ನಷ್ಟದ ರೂಪದಲ್ಲಿ ಮುಂದೆ ಬರಬಹುದು.

ಒಬ್ಬ ಸೃಷ್ಟಿಕರ್ತ, ಸರ್ವಸಮರ್ಥ್ಯ, ಸರ್ವವ್ಯಾಪಿಯಾದ ಅಲ್ಲಾಹನನ್ನು ನಂಬಬೇಕು ಮತ್ತು ನಮ್ಮ ಕರ್ಮಗಳ ಬಗ್ಗೆ ಪರಲೋಕದಲ್ಲಿ ಅವನ ಮುಂದೆ ಉತ್ತರಿಸಬೇಕಾಗಿದೆ ಎಂಬ ದೃಢ ಪ್ರಜ್ಞೆ ಇರಬೇಕು. ಇದನ್ನು ಅರಿತು ವೈಯಕ್ತಿಕ ಮತ್ತು ಸಾಮೂಹಿಕ ಜೀವನದಲ್ಲಿ ಅನುಸರಿಸಬೇಕು. ಇದರ ಹೊರತು ನಂಬುವುದು ಮತ್ತು ನಂಬದೆ ಇರುವುದು ವ್ಯರ್ಥವಾಗಿ ಬಿಡಬಹುದು. ವಿಶೇಷವಾಗಿ ಸೃಷ್ಟಿಕರ್ತನು ತನ್ನ ಸಂದೇಶ ಹಾಗೂ ಸಂಪೂರ್ಣ ಜೀವನಕ್ಕೆ ಬೇಕಾದ ಮಾರ್ಗದರ್ಶನಕ್ಕಾಗಿ ಕಳುಹಿಸಿದ ಪ್ರವಾದಿಗಳು, ಮಹಾಪುರುಷರು ಹಾಗೂ ಅಂತಿಮ ಪ್ರವಾದಿ ಮುಹಮ್ಮದ್(ಸ) ಮತ್ತು ಅವರಿಗೆ ಅವತೀರ್ಣಗೊಂಡ ಕುರ್‌ಆನನ್ನು ನಂಬಬೇಕಾದುದು ಅಗತ್ಯ.

ಓದುಗರಿಗೆ ಈ ಪುಸ್ತಕದ ಅಧ್ಯಯನವು ಜೀವನದ ಮೂಲಭೂತ ಮತ್ತು ಬಹಳ ಮುಖ್ಯ ವಿಷಯಗಳ ಬಗ್ಗೆ ತಿಳಿಯಲು ಮತ್ತು ಸ್ವೀಕರಿಸಿ ನಿರ್ಧಾರ ಕೈಗೊಳ್ಳಲು ಸಹಾಯಕವಾಗಲಿ ಎಂದು ಹಾರೈಸುತ್ತೇವೆ.

ಮುಹಮ್ಮದ್ ಇಕ್ಬಾಲ್ ಮುಲ್ಲಾ
ಕಾರ್ಯದರ್ಶಿ, ಜಮಾಅತೆ ಇಸ್ಲಾಮೀ ಹಿಂದ್
ನವದೆಹಲಿ - 110025
ಮೊಬೈಲ್ ಸಂಖ್ಯೆ 09810032508

# ಅನುಕ್ರಮಣಿಕೆ

# ಈ ಜೀವನದ ಬಳಿಕ ಮುಂದೇನು?

ಡಾ. ಮುಹಮ್ಮದ್ ಝೈನುಲ್ ಆಬಿದೀನ್ ಮನ್ಸೂರಿ

ನಮ್ಮ ದೇಶದಲ್ಲಿ ಧರ್ಮಗಳಿಗೆ ಬಹಳ ಪ್ರಾಧಾನ್ಯತೆ ಇದೆ. ಇಲ್ಲಿ ಪ್ರಾಚೀನ ಕಾಲದಿಂದಲೇ ಧರ್ಮವು ತನ್ನ ವಿಭಿನ್ನ ರೂಪದಲ್ಲಿ ಅಸ್ತಿತ್ವದಲ್ಲಿದೆ. ಧಾರ್ಮಿಕತೆಯು ಈ ದೇಶದ ವಿಶೇಷತೆಯಾಗಿದೆ. ದೇಶದ ಜನರನ್ನು ಇದು ಬಹಳ ಪ್ರಭಾವಿತಗೊಳಿಸಿದೆ. ಮನುಷ್ಯ ಜೀವನದಲ್ಲಿ ಧಾರ್ಮಿಕ ಚಿಂತನೆಗಳ ಅವಶ್ಯಕತೆ ಸದಾ ಇರುತ್ತದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಸಮಾಜದಲ್ಲಿ ಧಾರ್ಮಿಕ ನಂಬಿಕೆಗಳು ಮತ್ತು ವಿಚಾರಧಾರೆಗಳು ಇರುವುದು ಮಾತ್ರ ಮುಖ್ಯವಲ್ಲ, ಜನರ ಮಧ್ಯೆ ಈ ಧಾರ್ಮಿಕ ಮೌಲ್ಯಗಳಿಗೆ ಯಾವ ಬೆಲೆ ಇದೆ ಎಂಬುದು ಕೂಡಾ ಪ್ರಮುಖ ಪ್ರಶ್ನೆಯಾಗಿದೆ. ಇದನ್ನು ನಾವು ಕಡೆಗಣಿಸುವಂತಿಲ್ಲ, ನಾವು ಧಾರ್ಮಿಕ ಮೌಲ್ಯಗಳಿಗೆ ಎಷ್ಟು ಮಹತ್ವ ನೀಡುತ್ತೇವೋ ಅಷ್ಟೇ ಅದು ನಮ್ಮನ್ನು ಪ್ರಭಾವಿತಗೊಳಿಸುತ್ತದೆ. ಮನುಷ್ಯನ ನೈತಿಕತೆ, ಶೀಲ ಸ್ವಭಾವಗಳು ಮತ್ತು ಚಾರಿತ್ರ್ಯವನ್ನು ಅದು ಉತ್ತಮ ಪಡಿಸುತ್ತದೆ.

ಭಾರತೀಯ ಸಮಾಜವು ಹಲವು ಗಂಭೀರ ಸಮಸ್ಯೆಗಳಿಂದ ತತ್ತರಿಸುತ್ತಿದೆ. ಈ ಸಮಸ್ಯೆಗಳ ಪಟ್ಟಿ ಬೆಳೆಯುತ್ತಾ ಹೋಗುತ್ತಿದೆ. ಧಾರ್ಮಿಕ ಮೌಲ್ಯಗಳಿಗೆ ಬೆಲೆ ನೀಡದಿರುವುದು ಮತ್ತು ಭೌತಿಕವಾದಿ ಸಂಸ್ಕೃತಿಯ ದುರಾಕ್ರಮಣವು ಈ ಸಮಸ್ಯೆಗಳಿಗೆ ಪ್ರಮುಖ ಕಾರಣವಾಗಿದೆ. ಕೆಲವು ಸ್ವಾರ್ಥಿಗಳು ತಮ್ಮ ಉದ್ದೇಶ ಸಾಧನೆಗಾಗಿ ಸಮಾಜದಲ್ಲಿ ಹಲವು ಬಗೆಯ ಕೃತಕ ಸಮಸ್ಯೆಗಳನ್ನು ಸೃಷ್ಟಿಸಿ ಅವುಗಳು ಭಯಾನಕ ರೂಪ ತಾಳುವಂತೆ ಮಾಡಿದ್ದಾರೆ. ಈ ಮಂದಿಗಳು ಮನುಷ್ಯರ ಮನಸ್ಸನ್ನು ಎಷ್ಟರ ಮಟ್ಟಿಗೆ ಪ್ರಭಾವಿತಗೊಳಿಸಿದ್ದಾರೆಂದರೆ ಅವರು ಸ್ವೇಚ್ಛಾಚಾರ, ಸ್ವಚ್ಛಂದತೆ, ಮತ್ತು ಕೆಟ್ಟದಾರಿಯೆಡೆಗೆ ಜನರನ್ನು ಆಕರ್ಷಿಸುತ್ತಿದ್ದಾರೆ. ಇದರ ಕಾರಣದಿಂದಾಗಿ ಜನರಲ್ಲಿ ದೇವನ ಬಗ್ಗೆ ಯಾವ ರೀತಿಯ ನಿಷ್ಠೆ, ಭಕ್ತಿ ಮತ್ತು ವಿಧೇಯತೆ ಇರಬೇಕಿತ್ತೋ ಅದರ ಅಭಾವ ಗೋಚರವಾಗುತ್ತಿದೆ. ಅವರು ಹಲವು ಬಗೆಯ ಸಂಕೀರ್ಣತೆಗಳಿಗೆ ಬಲಿಯಾಗುತ್ತಿದ್ದಾರೆ. ಕೇವಲ ತೋರಿಕೆಯ ಕೆಲಸ ಮಾಡುತ್ತಿದ್ದಾರೆ. ಜನರನ್ನು ಭೌತಿಕವಾದಿಗಳಾಗಿಯೂ, ಚಲಿಸುವ ಯಂತ್ರಗಳಂತೆಯೂ ಮಾರ್ಪಡಿಸುತ್ತಿದ್ದಾರೆ. ಅವರ ಸಂಪೂರ್ಣ ಪ್ರಯತ್ನವು ಭೌತಿಕವಾದ ಮತ್ತು ಸಂಪತ್ತಿನ

ಗಳಿಕೆಗೆ ಪ್ರಾಪ್ತಿಗೊಳಿಸುವುದಕ್ಕೆ ಸೀಮಿತವಾಗಿದೆ. ಸರಿ ಅಥವಾ ತಪ್ಪು ಮಾರ್ಗಗಳ ಮೂಲಕ ಅದರ ಪ್ರಯತ್ನದಲ್ಲಿದ್ದಾರೆ. ಪರಲೋಕ ಪ್ರಜ್ಞೆಯು ಇಂತಹ ವ್ಯಕ್ತಿಗಳಲ್ಲಿ ಕಾಣಸುತ್ತಿಲ್ಲ. ಸೃಷ್ಟಿಕರ್ತನೊಂದಿಗೆ ಯಾವ ದಾಸ್ಯಪ್ರಜ್ಞೆ ಇರಬೇಕಿತ್ತೋ ಅದೂ ಕಾಣಸುತ್ತಿಲ್ಲ. ಪರಲೋಕ ಜೀವನದ ಬಗ್ಗೆಯೂ ಕಾಲ್ಪನಿಕವಾದ, ಅವಾಸ್ತವಿಕವಾದ, ಕೃತಕ ಕಲ್ಪನೆಗಳಿರುವುದರಿಂದ ಅದು ಹೆಚ್ಚು ಪ್ರಭಾವಪೂರ್ಣವಾಗುವುದಿಲ್ಲ.

## ಪರಲೋಕ ಜೀವನವನ್ನು ನಿರಾಕರಿಸುವುದರ ದುಷ್ಪರಿಣಾಮಗಳು

ಈ ಜೀವನದ ಬಳಿಕ ಬರಲಿರುವ ಜೀವನವನ್ನು ನಿರಾಕರಿಸುವುದರಿಂದ ಮನುಷ್ಯನ ಜೀವನದಲ್ಲಿ, ಅವನ ಚಾರಿತ್ರ್ಯದಲ್ಲಿ ಅನೇಕ ಕೆಡುಕುಗಳು ಕಂಡುಬರುತ್ತದೆ. ಅವನ ವ್ಯಕ್ತಿತ್ವವು ಸಂಕುಚಿತ ಮತ್ತು ವಿಕೃತವಾಗುತ್ತದೆ. ಅವನು ಮೌಲ್ಯ, ಮರ್ಯಾದೆ ಮತ್ತು ನೈತಿಕತೆಗೆ ಬೆಲೆ ನೀಡುವುದಿಲ್ಲ. ಸಾಮಾನ್ಯವಾಗಿ ಸತ್ಯ ಮತ್ತು ನೈತಿಕ ಕೆಲಸಗಳಿಗೆ ಮುಂದೆ ಬರುವುದಿಲ್ಲ. ವೈಯಕ್ತಿಕ ಲಾಭ-ಹಾನಿಯನ್ನು ಗಮನದಲ್ಲಿಟ್ಟುಕೊಂಡೇ ಕೆಲಸ ಮಾಡುತ್ತಾನೆ. ಕೆಟ್ಟ, ದುರಾಚಾರ, ಭ್ರಷ್ಟ ರೀತಿ-ನೀತಿಗಳನ್ನು ಅನುಸರಿಸುವುದಕ್ಕೆ ಸ್ವಲ್ಪವೂ ಸಂಕೋಚ ಪಡುವುದಿಲ್ಲ. ಈ ಕಾರಣದಿಂದಾಗಿ ಸಮಾಜವು ಹಲವು ರೀತಿಯ ಕೆಡುಕು, ಸಮಸ್ಯೆ ಮತ್ತು ತೊಂದರೆಗಳಿಗೆ ಒಳಗಾಗುತ್ತದೆ. ವರ್ತಮಾನ ಸಮಾಜದ ದುರ್ಗತಿಯು ನಮ್ಮ ಕಣ್ಣಮುಂದಿದೆ.

ಇಂದು ಜಗತ್ತಿನಲ್ಲಿ ದೊಡ್ಡ ಸಂಖ್ಯೆಯ ಜನರು ತಮ್ಮ ಕರ್ಮಗಳ ಬಗ್ಗೆ ನಿರ್ಲಕ್ಷ್ಯರೂ ಬೇಜವಾಬ್ದಾರರೂ ಆಗಿದ್ದಾರೆ. ಈ ಜಗತ್ತಿನ ಒಡೆಯನ ಮುಂದೆ ನಮ್ಮ ಈ ಲೌಕಿಕ ಜೀವನದ ಕರ್ಮಗಳ ಬಗ್ಗೆ ಉತ್ತರಿಸಬೇಕಾಗಿದೆ ಎಂಬುದನ್ನು ಅರಿತಿಲ್ಲ. ಕರ್ಮಗಳು ಉತ್ತಮವಾಗಿದ್ದರೆ ಅಂತಹವರಿಗೆ ಪುರಸ್ಕಾರ ಸಿಗುವುದು. ಈ ಲೋಕದಿಂದ ಕೆಡುಕುಗಳನ್ನು ಮಾಡಿ ಹೋಗಿದ್ದರೆ ಶಿಕ್ಷಿಸಲ್ಪಡುವನು ಮತ್ತು ನರಕವಾಸಿಯಾಗುವನು. ಪಾರಲೌಕಿಕ ಜೀವನದ ಬಗ್ಗೆ ಸರಿಯಾದ ನಂಬಿಕೆಯು ಮನುಷ್ಯನಿಗೆ ಸನ್ಮಾರ್ಗದರ್ಶನ ಮಾತ್ರ ಮಾಡುವುದಲ್ಲ; ಅವನಲ್ಲಿ ಉತ್ತಮ ನಡತೆ ಮತ್ತು ಚಾರಿತ್ರ್ಯವನ್ನು ಉಂಟು ಮಾಡುತ್ತದೆ. ಎಲ್ಲ ಕೆಲಸಗಳಿಗೂ ಅದಕ್ಕೆ ಸರಿಯಾದ ಮತ್ತು ಸಮಾನವಾದ ಫಲಿತಾಂಶ ಸಿಗಬೇಕು ಎಂಬುದು ಈ ಸೃಷ್ಟಿಯ ರಚನೆಯ ಹಿಂದಿರುವ ಉದ್ದೇಶ. ವಾಸ್ತವಿಕ, ನ್ಯಾಯ ಮತ್ತು ದೇವ ನಿಯಮದ ಬೇಡಿಕೆಯೂ ಇದುವೇ ಆಗಿದೆ.

ಮನುಷ್ಯ ತನ್ನ ಸೃಷ್ಟಿಕರ್ತನಿಗೆ ಕೃತಜ್ಞನಾಗದೇ ಇರುವಾಗ, ಅವನು ತನ್ನ ಕರ್ಮಗಳ ಪರಿಣಾಮದ ಬಗ್ಗೆ ನಿರ್ಲಕ್ಷ್ಯನಾಗುತ್ತಾನೆ. ಸತ್ಯ, ಒಳಿತು ಮತ್ತು ಪರೋಪಕಾರಿ ಕೆಲಸಗಳಿಂದ ದೂರ ಉಳಿಯುತ್ತಾನೆ. ಅವನು ಯಾವ ಕೆಲಸ ಮಾಡಿದರೂ ಅದರಿಂದ ಇತರರಿಗೆ

ತೊಂದರೆ ಮತ್ತು ನಷ್ಟವುಂಟಾಗುತ್ತದೆ. ಇದು ಸ್ವತಃ ಅವನ ಪಾಲಿಗೂ ದುಃಖಕರ, ಹಾನಿಕರ ಮತ್ತು ಅಮಂಗಳಕರವಾಗಿರುತ್ತದೆ.

## ಮಾನವ ಜೀವನದಲ್ಲಿ ದೋಷ

ಪರಲೋಕ ಜೀವನದ ಬಗ್ಗೆ ಸರಿಯಾದ, ನಿಖರವಾದ, ವಾಸ್ತವಿಕ ಮತ್ತು ಸುದೃಢವಾದ ನಂಬಿಕೆಯ ಕೊರತೆಯಿಂದಾಗಿ ಮನುಷ್ಯನ ಜೀವನವು ಅನೇಕಾನೇಕ ಸಮಸ್ಯೆಗಳು ಮತ್ತು ದೋಷಗಳಿಂದ ಕೂಡಿರುತ್ತದೆ. ಯಾವಾಗ ಮನುಷ್ಯನಿಗೆ ತಾನು ತನ್ನ ಕರ್ಮಗಳ ಬಗ್ಗೆ ಸರ್ವಶಕ್ತನಾದ ದೇವನ ಮುಂದೆ ಉತ್ತರಿಸಬೇಕಾಗಿದೆ ಎಂಬ ಪ್ರಜ್ಞೆ ಉಂಟಾಗುವುದಿಲ್ಲವೋ ಆಗ ಅವನಲ್ಲಿ ಅವನ ಆಚಾರ, ವಿಚಾರಗಳಲ್ಲಿ ದೇವಭಯವನ್ನು ಕಾಣಲು ಸಾಧ್ಯವಿಲ್ಲ, ಸ್ವಚ್ಛಂದವಾಗಿ ಮತ್ತು ಸ್ವತಂತ್ರನಾಗಿ ತನ್ನ ಮನಸ್ಸಿನ ಇಚ್ಛೆಯಂತೆ ಕೆಲಸ ಮಾಡುತ್ತಾನೆ. ತನ್ನ ಕೆಲಸದಲ್ಲಿ ಧರ್ಮಬದ್ಧ-ನಿಷಿದ್ಧ, ಉಚಿತ-ಅನುಚಿತ, ಒಳಿತು-ಕೆಡುಕು, ಲಜ್ಜೆಯುಳ್ಳ-ಲಜ್ಜಾಹೀನ ಎಂಬ ಭೇದಭಾವವನ್ನು ಪರಿಗಣಿಸುವುದಿಲ್ಲ, ಮನುಷ್ಯನ ಪ್ರಾಣ ಮತ್ತು ಸಂಪತ್ತನ್ನು ಆಟಿಕೆಯಂತೆ ಉಪಯೋಗಿಸುವ ಬಗ್ಗೆಯೂ ಅವನಲ್ಲಿ ಸಂಕೋಚ ಉಂಟಾಗುವುದಿಲ್ಲ.

ದೇವಭಯ, ಪರಲೋಕ ಪ್ರಜ್ಞೆ ಮತ್ತು ತನ್ನ ಕರ್ಮಗಳ ಪ್ರತಿಫಲದ ಬಗ್ಗೆ ಸರಿಯಾದ ನಂಬಿಕೆಯ ಅಭಾವದಿಂದಾಗಿ, ಮನುಷ್ಯ ತನ್ನ ಸ್ವಾರ್ಥಸಾಧನೆಗಾಗಿ ನಿರ್ದೋಷಿ ವ್ಯಕ್ತಿಗಳ ಕೊಲೆ, ನವಜಾತ ಹೆಣ್ಣು ಶಿಶುಗಳ ಹತ್ಯೆ ಮತ್ತು ಜನರ ಸಂಪತ್ತನ್ನು ಲೂಟಿ ಮಾಡುವ ಮತ್ತು ಅವರನ್ನು ಸರ್ವನಾಶ ಮಾಡಿ ಬಿಡುವಂತಹ ಕೆಲಸಗಳನ್ನು ಮಾಡುತ್ತಾನೆ. ಮಹಿಳೆಯರನ್ನು ಮತ್ತು ಹೆಣ್ಣು ಮಕ್ಕಳನ್ನು ತನ್ನ ಬೇಡಿಕೆಯನ್ನು ಈಡೇರಿಸುವ ಸಾಧನದಂತೆ ಉಪಯೋಗಿಸುತ್ತಾನೆ. ಅವರ ಜೊತೆ ವಿವಿಧ ರೀತಿಯ ಅನ್ಯಾಯವೆಸಗುತ್ತಾನೆ. ನಿಷ್ಠುರನಾಗಿ ವರ್ತಿಸುತ್ತಾನೆ. ಜನರ ಹಕ್ಕುಚ್ಯುತಿ ಮಾಡುತ್ತಾನೆ. ಶರಾಬು ಕುಡಿಯುವುದು, ಬಡ್ಡಿ ತಿನ್ನುವುದು, ಅಶ್ಲೀಲತೆ, ನಗ್ನತೆ ಮತ್ತು ನಿರ್ಲಜ್ಜೆಯ ಕೆಲಸವನ್ನು ಮಾಡುತ್ತಾ ಶಾರೀರಿಕವಾಗಿಯೂ ಮಾನಸಿಕವಾಗಿಯೂ ಕುಂಠಿತಗೊಳ್ಳುತ್ತಾನೆ. ಜನರಿಗೆ ತಪ್ಪು ಮಾರ್ಗದರ್ಶನ ಮಾಡುತ್ತಾನೆ. ತನಗಿಂತ ದುರ್ಬಲರಾದವರನ್ನು ಶೋಷಿಸುತ್ತಾನೆ. ಇತರರನ್ನು ಶೋಷಿಸುವಂತೆ ಪ್ರೇರೇಪಿಸುತ್ತಾನೆ. ಇತರರ ಮಾನ ನಷ್ಟಮಾಡಿ ತನ್ನ ಅಹಂ ಅನ್ನು ತೃಪ್ತಿ ಪಡಿಸಿ ಅದರಿಂದಲೇ ಸಂತುಷ್ಟನಾಗುತ್ತಾನೆ. ಯಾರೊಂದಿಗೂ ನ್ಯಾಯಪೂರ್ಣ ವ್ಯವಹಾರ ಮಾಡುವುದಿಲ್ಲ.

ಈ ರೀತಿಯಲ್ಲಿ ದಲಿತರು ಸದಾ ದಮನಿತರಾಗಿ ಉಳಿಯುವಂತೆ ಮಾಡುತ್ತಾನೆ. ಅವರ ವೇದನೆ, ದುಃಖ, ಆಕ್ರಂದನ ಮತ್ತು ಅಸಹಾಯಕ ಅವಸ್ಥೆಯ ಬಗ್ಗೆ ಅವನಿಗೆ ಕನಿಕರ ಉಂಟಾಗುವುದಿಲ್ಲ, ಮಾತ್ರವಲ್ಲ, ಅವರ ಬಗ್ಗೆ ಸಹಾನುಭೂತಿಯನ್ನೂ ಪ್ರಕಟಿಸುವುದಿಲ್ಲ.

ಈ ರೀತಿ ಹಿಂಸೆ, ತೊಂದರೆ, ಅತ್ಯಾಚಾರ, ಅನಾಚಾರ ಮತ್ತು ಅನ್ಯಾಯದ ಕ್ರಮವು ಜಾರಿಯಲ್ಲಿರುತ್ತದೆ. ಇವೆಲ್ಲವೂ ಸಹಜ ಎಂದು ಪ್ರತಿಪಾದಿಸಲು ಮತ್ತು ಇದಕ್ಕೆದುರಾಗುವ ವಿರೋಧವನ್ನು ನಕಾರಾತ್ಮಕಗೊಳಿಸಲಿಕ್ಕಾಗಿ, ಇವೆಲ್ಲವೂ ಸಾಮಾನ್ಯ ಮತ್ತು ಪೂರ್ವಕರ್ಮದ ಶಿಕ್ಷೆ ಸಿಗುತ್ತದೆ ಎಂದು ನಂಬಿಸಲಾಗುತ್ತದೆ. ಈ ರೀತಿ ಸಮಾಜವು ಅಮಾನವೀಯವಾಗಿ ಮಾರ್ಪಡುತ್ತದೆ.

## ಪರಲೋಕ ಜೀವನವನ್ನು ನಂಬುವುದರ ಪ್ರಯೋಜನಗಳು

ಇದಕ್ಕೆ ವ್ಯತಿರಿಕ್ತವಾಗಿ ಪರಲೋಕ ಜೀವನವನ್ನು ನಂಬುವ ವ್ಯಕ್ತಿಗಳ ಜೀವನವು ಪವಿತ್ರವಾಗಿರುತ್ತದೆ ಮತ್ತು ಸರಿಯಾಗಿರುತ್ತದೆ. ಅವರು ಯಾವಾಗಲೂ ಒಳ್ಳೆಯ ಮತ್ತು ಒಳಿತಿನ ಕೆಲಸಗಳನ್ನು ಮಾಡುತ್ತಾರೆ. ಯಾರ ಹಕ್ಕುಚ್ಯುತಿಯನ್ನು ಮಾಡುವುದಿಲ್ಲ, ಯಾರ ಮೇಲೂ ಅನ್ಯಾಯವೆಸಗುವುದಿಲ್ಲ, ಎಲ್ಲರ ಲಾಭ, ಹಿತ ಮತ್ತು ಕಲ್ಯಾಣವನ್ನು ಬಯಸುತ್ತಾರೆ. ತಮಗೆ ಇಷ್ಟವಾದುದನ್ನೇ ಇತರರಿಗೂ ಬಯಸುತ್ತಾರೆ. ಈ ಜಗತ್ತನ್ನೇ ತಮ್ಮ ಸರ್ವಸ್ವವೆಂದು ಬಗೆಯುವುದಿಲ್ಲ, ಈ ಜಗತ್ತಿನ ಸುಖಾಡಂಬರಗಳ ಲಾಲಸೆ ಅವರಲ್ಲಿ ಇರುವುದಿಲ್ಲ, ಅವರ ದೃಷ್ಟಿಯು ವಿಶಾಲವಾಗಿರುತ್ತದೆ. ಶೀಘ್ರವಾಗಿ ಸಿಗುವ ಮತ್ತು ತಾತ್ಕಾಲಿಕವಾಗಿರುವ ಲಾಭಗಳನ್ನು ಸರ್ವಸ್ವವೆಂದು ತಿಳಿಯದೆ, ಈ ಜೀವನದ ಬಳಿಕ ಬರುವ ಶಾಶ್ವತ ಜೀವನದ ಸುಖ, ಶಾಂತಿ, ಸಂತೋಷ ಮತ್ತು ಯಶಸ್ಸಿನ ಆಕಾಂಕ್ಷಿಗಳಾಗಿರುತ್ತಾರೆ. ಆದಕ್ಕಾಗಿ ಅವರು ಒಳಿತು ಮತ್ತು ಒಳ್ಳೆಯ ಕೆಲಸಗಳನ್ನು ಮಾತ್ರ ಮಾಡುತ್ತಾರೆ. ಕೆಡುಕು, ಅತ್ಯಾಚಾರ, ಅನಾಚಾರ, ಅಶ್ಲೀಲತೆ ಮತ್ತು ಅನ್ಯಾಯಗಳಿಂದ ದೂರ ಉಳಿಯುತ್ತಾರೆ.

ಆತ್ಮಸ್ಥೈರ್ಯ ಮತ್ತು ಕ್ರಿಯಾಶೀಲತೆಯನ್ನು ಪರಲೋಕ ಪ್ರಜ್ಞೆ ಇರುವ ವ್ಯಕ್ತಿಗಳಲ್ಲಿ ಕಾಣಲಿಕ್ಕೆ ಸಾಧ್ಯ. ನಿರಾಶೆ ಮತ್ತು ಹೇಡಿತನವು ಅವರ ಬಳಿ ಸುಳಿಯುವುದಿಲ್ಲ, ದೇವನ ಬಗ್ಗೆ ಅವರಿಗೆ ಸಂಪೂರ್ಣ ವಿಶ್ವಾಸವಿರುತ್ತದೆ. ಪರಲೋಕ ಜೀವನದ ಯಶಸ್ಸಿಗಾಗಿ ಈ ಜಗತ್ತಿನಲ್ಲಿ ಎದುರಾಗುವ ಎಲ್ಲ ಸಮಸ್ಯೆಗಳನ್ನು, ಸಂಕಷ್ಟಗಳನ್ನು ಬಹಳ ಸಹಜವಾಗಿ ಮತ್ತು ಧೈರ್ಯದಿಂದ ಎದುರಿಸುತ್ತಾರೆ. ಜೀವನದಲ್ಲಿ ಎದುರಾಗುವ ಸಮಸ್ಯೆಗಳಿಂದಾಗಿ ಅವರ ಕರ್ತವ್ಯಪ್ರಜ್ಞೆಗೆ ಕುಂದುಂಟಾಗುವುದಿಲ್ಲ, ಎಲ್ಲ ಸಮಸ್ಯೆಗಳನ್ನು ಬಹಳ ಕ್ರಿಯಾಶೀಲರಾಗಿ ಎದುರಿಸುತ್ತಾರೆ. ಎಂದೂ ಧೈರ್ಯಗುಂದುವುದಿಲ್ಲ, ಜಗತ್ತಿನಲ್ಲಿ ಯಾವುದೇ ಸೋಲು ಅವರನ್ನು ಹತಾಶರಾಗಿಸುವುದಿಲ್ಲ, ಸಮಸ್ಯೆಗಳಿಗೆ ಹೆದರಿ, ನಿರಾಶರಾಗಿ, ಜೀವನದಿಂದಲೇ ಬೇಸತ್ತು ಆತ್ಮಹತ್ಯೆ ಮಾಡಿಕೊಳ್ಳುವುದಿಲ್ಲ, ಏಕೆಂದರೆ ಈ ಜಗತ್ತಿನಲ್ಲಿ ಎದುರಾಗುವ ಪ್ರತಿಕೂಲ ಪರಿಸ್ಥಿತಿಗಳೆಲ್ಲ, ಈ ಜಗತ್ತಿನಂತೆಯೇ ಸೀಮಿತವಾಗಿರುತ್ತದೆ ಮತ್ತು ನಶ್ವರವಾಗಿರುತ್ತದೆ. ಸತ್ಯನಿಷ್ಠೆಯಲ್ಲಿ ಜೀವಿಸಿದ್ದಕ್ಕಾಗಿ, ಆನಂದಮಯವಾದ ಶಾಶ್ವತವಾದ, ಸ್ಥಿರವಾದ ಪರಿಣಾಮ ಖಂಡಿತವಾಗಿಯೂ ಸ್ವರ್ಗದ ರೂಪದಲ್ಲಿ ಸಿಗುತ್ತದೆ.

ಈ ಜಗತ್ತಿನಲ್ಲಿ ಒಡಕಿನ ಬದಲು ರಚನಾತ್ಮಕ ಕೆಲಸಗಳನ್ನು ಮಾಡಿದರೆ, ಅಶಾಂತಿ ಅತ್ಯಾಚಾರದ ಸ್ಥಳದಲ್ಲಿ ಶಾಂತಿಯ ವಾತಾವರಣವನ್ನುಂಟು ಮಾಡಲು ಪ್ರಯತ್ನಿಸಿದರೆ, ಜಗತ್ತಿನಲ್ಲಿರುವ ಕೆಡುಕುಗಳನ್ನು ಇಲ್ಲವಾಗಿಸುವಲ್ಲಿ ಪ್ರಯತ್ನಿಸಿದರೆ ಪರಲೋಕ ಜೀವನದಲ್ಲಿ ಯಶಸ್ಸು ಲಭಿಸುತ್ತದೆ ಎಂಬುದು ಅವರಿಗೆ ಚೆನ್ನಾಗಿ ತಿಳಿದಿರುತ್ತದೆ. ಪರಲೋಕದ ಮೇಲೆ ವಿಶ್ವಾಸವಿರಿಸುವ ವ್ಯಕ್ತಿಗಳು ಬಡವರು, ದುರ್ಬಲರು ಮತ್ತು ಅಸಹಾಯಕರು ಯಾವುದೇ ಜಾತಿ, ಧರ್ಮಕ್ಕೆ ಸೇರಿದವರಾಗಿರಲಿ, ಅವರಿಗೆ ಸಹಾಯವನ್ನು ಮಾಡಲು ಹಾಗೂ ಪ್ರತಿಯೊಂದು ಕೆಡುಕು, ಅತ್ಯಾಚಾರ ಮತ್ತು ಅನಾಚಾರಗಳನ್ನು ಇಲ್ಲವಾಗಿಸಲು ಸದಾ ಪ್ರಯತ್ನಿಸುತ್ತಿರುತ್ತಾರೆ. ಸತ್ಯ ಮತ್ತು ಒಳಿತಿನ ಕೆಲಸಗಳಲ್ಲಿ ಮುಂಚೂಣಿಯಲ್ಲಿರುತ್ತಾರೆ. ಇದಕ್ಕಾಗಿ ಆಗತ್ಯವಿದ್ದರೆ ಪ್ರಾಣ ಮತ್ತು ಸಂಪತ್ತನ್ನು ಬಲಿ ನೀಡಲು ಸಿದ್ಧರಾಗುತ್ತಾರೆ. ಸದ್ಗುಣ ಮತ್ತು ಸದ್ವಿಚಾರಗಳ ಆಧಾರದ ಮೇಲೆ ನಿರ್ಮಿತವಾದ ಸಮಾಜವು ಸಹಜವಾಗಿಯೇ ಕೆಡುಕು ಮತ್ತು ಅನ್ಯಾಯ ಅಕ್ರಮಗಳಿಂದ ಮುಕ್ತವಾಗಿರುವುದು. ಅಲ್ಲಿ ಪರಸ್ಪರರ ಬಗ್ಗೆ ಸಹಾನುಭೂತಿ, ದಯೆ ಮತ್ತು ಸಹಕಾರದ ಮನೋಭಾವವಿರುವುದು. ಇತರರ ಅವಶ್ಯಕತೆಗಳನ್ನು ಪೂರ್ಣಗೊಳಿಸಲು ಅವಕಾಶವನ್ನು ನೀಡಲಾಗುವುದು. ಅವರಲ್ಲಿ ಅಹಂಕಾರ, ಗರ್ವ ಮತ್ತು ಜಂಭವು ಕಾಣಸಿಗಲಾರದು. ಜನರಲ್ಲಿ ದೇವಭಯವಿರುವುದು ಮತ್ತು ಈ ಕಾರಣದಿಂದಾಗಿ ಇತರೆಲ್ಲ ಭಯಗಳು ಹೊರಟು ಹೋಗುವುದು. ಪರಲೋಕ ಜೀವನವು ದೇವನ ಕೈಯಲ್ಲಿದೆ ಎಂಬ ದೃಢ ನಂಬಿಕೆ ಅವರಲ್ಲಿರುವುದು. ಈ ರೀತಿ ಮನುಷ್ಯರು ಅಂಧಕಾರದಿಂದ ಪ್ರಕಾಶದೆಡೆಗೆ ಬರುತ್ತಾರೆ. ಒಳಿತು ಮತ್ತು ಉತ್ತಮ ಕೆಲಸಗಳಲ್ಲಿ ನಿರತರಾಗಿ ಈ ಲೋಕ ಮತ್ತು ಪರಲೋಕದಲ್ಲಿ ವಿಜಯಿಗಳಾಗುವರು.

## ಇಸ್ಲಾಮಿನಲ್ಲಿ ಪರಲೋಕ ಜೀವನದ ಪರಿಕಲ್ಪನೆ

ಪರಲೋಕದ ಮೇಲಿನ ವಿಶ್ವಾಸವು ಇಸ್ಲಾಮಿನ ಆಧಾರಸ್ತಂಭಗಳ ಪೈಕಿ ಒಂದಾಗಿದೆ. ಈ ಲೋಕಕ್ಕೆ ಪರಲೋಕದೊಂದಿಗೆ ಬಹಳ ಗಾಢ ಸಂಬಂಧವಿದೆ. ಪರಲೋಕ ಈ ಲೋಕದ ವಿಕಸಿತರೂಪವಾಗಿದೆ. ಇಲ್ಲಿ ಕಾಣುವ ಕೊರತೆಗಳನ್ನು ಅಲ್ಲಿ ಪೂರ್ಣಗೊಳಿಸಲಾಗುವುದು. ಇಲ್ಲಿ ನಮ್ಮಿಂದ ಮರೆಯಾಗಿರುವ ವಸ್ತುಗಳು ಅಲ್ಲಿ ಮರೆಯಾಗಿರಲಾರವು. ಪ್ರಪಂಚದಲ್ಲಿ ಮನುಷ್ಯನಿಗೆ ತಾನು ಮಾಡಿದ ಒಳಿತು ಮತ್ತು ಕೆಡುಕುಗಳಿಗಾಗಿ ಸರಿಯಾದ ಪ್ರತಿಫಲವನ್ನು ಪಡೆಯಲು ಸಾಧ್ಯವಾಗುವುದಿಲ್ಲ, ಮನುಷ್ಯನ ಉತ್ತಮ ಮತ್ತು ಕೆಟ್ಟ ಕೆಲಸಗಳ ಪರಿಣಾಮವು ಅವನ ಜೀವನದೊಂದಿಗೆ ಕೊನೆಗೊಳ್ಳುವುದಿಲ್ಲ, ಶತಮಾನಗಳವರೆಗೆ ಒಳಿತು-ಕೆಡುಕುಗಳ ಪ್ರಭಾವವು ಮುಂದುವರಿಯುತ್ತಿರುತ್ತದೆ.

ಒಬ್ಬ ವ್ಯಕ್ತಿ ಮಾನವರನ್ನು ಅಕ್ಷರಸ್ಥರನ್ನಾಗಿಯೂ ಸಂಸ್ಕಾರವಂತರಾಗಿಯೂ ಮಾಡಿದ್ದರೆ ಅದರ ಪ್ರಭಾವವು ದೀರ್ಘಕಾಲದ ತನಕ ಇರುವುದು. ಯಾರಾದರೂ ಮನುಷ್ಯರಿಗೆ ತಪ್ಪು

ದಾರಿಯನ್ನು ತೋರಿಸಿದ್ದರೆ, ಅನ್ಯಾಯವೆಸಗಿದ್ದರೆ ಅದರ ಪ್ರಭಾವವೂ ಸುದೀರ್ಘ ಕಾಲದವರೆಗೆ ಮುಂದುವರಿಯುವುದು. ಒಳಿತು ಮಾಡಿದ ವ್ಯಕ್ತಿಗಳಿಗೆ ಅದರಿಂದ ಯಾರೆಲ್ಲ ಪ್ರಯೋಜನ ಪಡೆದು ಉತ್ತಮ ವ್ಯಕ್ತಿಗಳಾದರೋ ಅವರ ಮುಂದೆ ಒಳಿತು ಮಾಡಿದ ವ್ಯಕ್ತಿಯನ್ನು ಪುರಸ್ಕರಿಸಲಾಗುವುದು. ಯಾರು ಕೆಡುಕನ್ನು ಮಾಡಿ ಅದರಿಂದ ಯಾರೆಲ್ಲ ಮಾರ್ಗಭ್ರಷ್ಟರಾಗಿ ಕೆಟ್ಟಹಾದಿಯನ್ನು ತುಳಿದಿದ್ದಾರೋ ಅಂತಹ ವ್ಯಕ್ತಿಗಳ ಮುಂದೆ ಪರಲೋಕದಲ್ಲಿ ಶಿಕ್ಷೆಯನ್ನು ಪ್ರಕಟಿಸಲಾಗುವುದು. ಈ ರೀತಿಯ ಸಂಪೂರ್ಣ ನ್ಯಾಯವನ್ನು ಈ ನಶ್ವರವಾದ ಜೀವನದಲ್ಲಿ ನೀಡುವುದು ಸಾಧ್ಯವಿಲ್ಲ, ಆದುದರಿಂದ ಸಂಪೂರ್ಣವಾಗಿ ನಿಷ್ಪಕ್ಷವಾದ ನ್ಯಾಯದ ತೀರ್ಮಾನಕ್ಕಾಗಿಯೂ ಪರಲೋಕ ಅವಶ್ಯಕವಾಗಿದೆ.

ಇಸ್ಲಾಮಿನ ಪ್ರಕಾರ ಮನುಷ್ಯನ ಲೌಕಿಕ ಜೀವನವು ಪರೀಕ್ಷೆಯಾಗಿದೆ. ಇದು ನಶ್ವರವಾದ ಲೋಕ. ಇದು ಒಂದಲ್ಲ ಒಂದುದಿನ ನಾಶವಾಗಿಯೇ ತೀರುವುದು. ಪರಲೋಕ ಜೀವನವು ಶಾಶ್ವತವಾದ ಜೀವನವಾಗಿದೆ. ಯಾರು ಏಕದೇವತ್ವ(ತೌಹೀದ್), ಪ್ರವಾದಿತ್ವ(ರಿಸಾಲತ್) ಮತ್ತು ಪರಲೋಕ(ಆಖಿರತ್)ವನ್ನು ನಂಬುತ್ತಾರೋ ಜೀವನದಲ್ಲಿ ದೇವನ ಆದೇಶಗಳನ್ನು ಪಾಲಿಸುತ್ತಾರೋ ಒಳಿತು ಮತ್ತು ಪುಣ್ಯದ ಕೆಲಸದಲ್ಲಿ ನಿರತರಾಗಿರುತ್ತಾರೋ ಅವರಿಗೆ ಪರಲೋಕ ಹಾಗೂ ಜೀವನದಲ್ಲಿ ಉತ್ತಮ ಪ್ರತಿಫಲ ಸ್ವರ್ಗ ಲಭಿಸುವುದು. ಅದು ಶಾಶ್ವತವಾದ ಸುಖ, ಶಾಂತಿ, ನೆಮ್ಮದಿ ತುಂಬಿದ ಜೀವನವಾಗಿರುವುದು. ಇದಕ್ಕೆ ತದ್ವಿರುದ್ಧವಾಗಿ ಜೀವಿಸಿದವರು ನರಕದ ಶಿಕ್ಷೆಯಿಂದ ಯಾತನೆಗೊಳಗಾಗುವರು. ವಾಸ್ತವದಲ್ಲಿ ಮನುಷ್ಯನ ಪರಿಶ್ರಮ, ಅವನ ನೀತಿಚಾರಿತ್ರ್ಯಗಳು, ಕರ್ಮಗಳು ಪ್ರತಿಫಲಕ್ಕೆ ಅರ್ಹವಾಗಿರುವುದು.

ಪರಲೋಕದಲ್ಲಿ ಮನುಷ್ಯನು ತನ್ನ ಕರ್ಮಗಳನ್ನು ಅಡಗಿಸಲಾರನು. ಅವನ ಎಲ್ಲ ಕೆಲಸಗಳು ಬಹಿರಂಗಗೊಳ್ಳುವುದು. ಅಂದು ಮನುಷ್ಯನ ಕಣ್ಣು, ಕಿವಿ, ನಾಲಗೆ, ಚರ್ಮ, ಕೈಕಾಲುಗಳು ತಮ್ಮ ಕರ್ಮಗಳ ಬಗ್ಗೆ ಸಾಕ್ಷ್ಯ ಹೇಳುವುದು. ದೇವ ನ್ಯಾಯಾಲಯದಲ್ಲಿ ಅಪರಾಧಿಯು ತನ್ನ ಅಪರಾಧಗಳನ್ನು ಸ್ವಯಂ ಒಪ್ಪಿಕೊಳ್ಳುವನು. ಅವನಿಗೆ ಅವನ ಕರ್ಮಗಳ ಬಗ್ಗೆ ಪಶ್ಚಾತ್ತಾಪ ಉಂಟಾಗುವುದು. ತನ್ನನ್ನು ಪುನಃ ಭೂಮಿಗೆ ಕಳುಹಿಸುತ್ತಿದ್ದರೆ, ಒಳ್ಳೆಯ ಕರ್ಮಗಳನ್ನು ಮಾಡಿ ಬರುವೆನೆಂದು ಅವನು ಆಶೆ ಪಡುವನು. ಆದರೆ ಅದಕ್ಕೆ ಅವಕಾಶ ಸಿಗಲಾರದು. ಏಕೆಂದರೆ ಇಹಲೋಕದ ಪರೀಕ್ಷಾ ಕಾಲವು ಮುಗಿದು ಹೋಗಿರುವುದು. ಪರಲೋಕದ ದೇವನ್ಯಾಯಾಲಯದಲ್ಲಿ ಯಾರೂ ಅವನಿಗೆ ಸಹಾಯ ಮಾಡಲಾರರು. ಯಾವ ಸಂಬಂಧ ಗೆಳೆತನಗಳೂ ಪ್ರಯೋಜನಕ್ಕೆ ಬರಲಾರವು. ಗೆಳೆಯರೂ ಸಹಾಯಕ್ಕೆ ಒದಗಲಾರದು. ಯಾರು ಈ ಜಗತ್ತಿನಲ್ಲಿ ದೇವನೊಂದಿಗೆ ಇತರರನ್ನು ಭಾಗೀದಾರರನ್ನಾಗಿ ಮಾಡಿದನೋ ಯಾರ ಮೇಲೆ ನಿರೀಕ್ಷೆಯನ್ನಿರಿಸಿಕೊಂಡಿದ್ದನೋ

ಅವರಿಂದಲೂ ಯಾವ ಸಹಾಯವೂ ಸಿಗಲಾರದು. ಯಾರೂ ಯಾರ ಹೊರೆಯನ್ನೂ ಹೊರಲಾರರು. ಎಲ್ಲರಿಗೂ ಅವರದೇ ಚಿಂತೆಯಿರುವುದು. ಅಂದು ಪ್ರತಿಯೊಬ್ಬ ಮನುಷ್ಯನ ಕರ್ಮಪತ್ರವನ್ನು ಮುಂದಿರಿಸಲಾಗುವುದು. ಮನುಷ್ಯನ ಪ್ರತಿಯೊಂದು ಕರ್ಮವೂ ಅಲ್ಲಾಹನ ಆದೇಶದ ಪ್ರಕಾರ ದಾಖಲಿಸಲ್ಪಡುತ್ತಿದೆ ಎಂದು ಪವಿತ್ರ ಕುರ್‌ಆನ್ ಹೇಳುತ್ತದೆ.

ಪರಲೋಕದ ದೇವನ್ಯಾಯಾಲಯದಲ್ಲಿ ಪ್ರತಿಯೊಬ್ಬ ಮನುಷ್ಯನಿಗೂ ಸಂಪೂರ್ಣ ನ್ಯಾಯ ಸಿಗುವುದು. ಯಾರಿಗೂ ಅನ್ಯಾಯವಾಗಲಾರದು. ಅಂದು ಯಾರೂ ಯಾರದೇ ಹಕ್ಕು ಚ್ಯುತಿ ಮಾಡಲಾರರು. ಯಾರು ಯಾವ ಕೆಲಸ ಮಾಡಿರುವರೋ ಅದಕ್ಕೆ ತಕ್ಕುದಾದ ಪ್ರತಿಫಲ ಸಿಗುವುದು. ಅಲ್ಲಿ ನ್ಯಾಯ ತಕ್ಕಡಿ ಇರುವುದು. ಯಾರ ಒಳಿತಿನ ತಕ್ಕಡಿಯು ಭಾರವಾಗಿರುವುದೋ ಅವರು ವಿಜಯ ಹೊಂದಿ ಸ್ವರ್ಗಕ್ಕೆ ಹೋಗುವರು. ಯಾರ ಒಳಿತಿನ ತಕ್ಕಡಿಯು ಹಗುರವಾಗಿರುವುದೋ ಅವರು ನರಕಕ್ಕೆ ಹೋಗುವರು.

ಯಾವ ಮನುಷ್ಯನೂ ತನಗೆ ಕೆಡುಕು ಮತ್ತು ನಷ್ಟವುಂಟಾಗುವುದನ್ನು ಬಯಸಲಾರನು. ಮನುಷ್ಯ ದೇವನ ಆಜ್ಞೆಗಳನ್ನು ಅನುಸರಿಸುವವನಾಗಬೇಕು. ಸನ್ಮಾರ್ಗದಲ್ಲಿ ನಡೆಯಬೇಕು ಎಂಬುದು ಅವನ ಮೂಲ ಸ್ವಭಾವದಲ್ಲೇ ಇದೆ. ಆದರೆ ಮನುಷ್ಯ ಯಾವಾಗ ತನ್ನ ಸ್ವಭಾವವನ್ನು ತನ್ನ ಮನಸ್ಸೇಚ್ಛೆ, ಸ್ವಾರ್ಥ ಮತ್ತು ಬಾಹ್ಯ ಒತ್ತಡಗಳಿಗೆ ಅಧೀನಗೊಳಿಸುತ್ತಾನೋ ಆಗ ಸ್ವಯಂ ಕೆಡುಕಿನೆಡೆಗೆ ಸಾಗುತ್ತಾನೆ. ಅವನ ಜೀವನವು ಒಳ್ಳೆಯ ನಡತೆ, ನೈತಿಕತೆ ಮತ್ತು ಧಾರ್ಮಿಕ ಮೌಲ್ಯಗಳಿಂದ, ಮರ್ಯಾದೆಯಿಂದ ಕ್ರಮೇಣ ದೂರವಾಗುತ್ತದೆ. ವಿವಿಧ ಕೆಡುಕುಗಳು ಮನೆಮಾಡಿಕೊಳ್ಳುತ್ತವೆ.

ಇಂದು ಮನುಷ್ಯನ ಜೀವನದಲ್ಲಿ ಯಾವ ರೀತಿಯ ಕೆಡುಕು ಮತ್ತು ವಿಕೃತ ಕೆಲಸಗಳು ಕಾಣಸಿಗುತ್ತವೆಯೋ ಅವುಗಳನ್ನು ಆರಂಭದಲ್ಲಿ ಪ್ರಸ್ತಾಪಿಸಲಾಗಿದೆ. ಮನುಷ್ಯನಲ್ಲಿ ದೇವಭಯ ಇಲ್ಲದಿರುವುದು ಮತ್ತು ಪರಲೋಕ ಜೀವನದ ಬಗ್ಗೆ ಸರಿಯಾದ ನಿಲುವು ತಾಳುವ ವಿಷಯದಲ್ಲಿ ಉದಾಸೀನತೆ, ನಿರ್ಲಕ್ಷ್ಯ, ಆಸಕ್ತಿ ಇಲ್ಲದಿರುವಿಕೆ, ಜಾಗೃತಿ ಇಲ್ಲದಿರುವುದು ಈ ಎಲ್ಲ ಕೆಡುಕುಗಳಿಗಿರುವ ಮೂಲ ಕಾರಣವಾಗಿದೆ. ಬನ್ನಿ ನಾವು ಜೀವನದಲ್ಲಿ ಧರ್ಮದ ವಿಚಾರಗಳನ್ನು ಅಳವಡಿಸಿಕೊಂಡು ಜೀವನವನ್ನು ಸುಧಾರಿಸಿಕೊಳ್ಳೋಣ. ಆ ಮೂಲಕ ಈ ಲೋಕದಲ್ಲೂ ಪುರಸ್ಕಾರಕ್ಕೆ ಪಾತ್ರರಾಗೋಣ. ಆಗ ಅವರ ಜೊತೆಗೆ ಈ ನಮ್ಮ ಸಮಾಜದ ಮತ್ತು ದೇಶದ ನವನಿರ್ಮಾಣವಾಗುವುದು. ಮಾನವತೆಯ ಗೌರವವೂ ಹೆಚ್ಚಾಗುವುದು.



# ಕರ್ಮ, ಪುನರುಜ್ಜೀವನ ಮತ್ತು ಇಸ್ಲಾಮ್

✍ ಡಾ। ಮುಹಮ್ಮದ್ ಅಹ್ಮದ್

ಇಂದು ಮೀಡಿಯಾಗಳಲ್ಲಿ ಬೇರೆ ಬೇರೆ ವಯಸ್ಸಿನ ಹುಡುಗ-ಹುಡುಗಿಯರು ಮತ್ತು ಸ್ತ್ರೀ-ಪುರುಷರು ತಮ್ಮ ಹಿಂದಿನ ಜನ್ಮದ ಘಟನೆಗಳನ್ನು ಹೇಳುವ ವಿವಿಧ ಕಾರ್ಯಕ್ರಮಗಳು ಪ್ರಸಾರವಾಗುತ್ತಿರುತ್ತವೆ. ಟಿವಿ ಚಾನಲೊಂದು ಮುಂದಾಲೋಚನೆಯಿಲ್ಲದೆ ಕೇವಲ ವ್ಯಾಪಾರಿ ದೃಷ್ಟಿಯಿಂದ ತಮ್ಮ T.R.P(ವೀಕ್ಷಕರ ಸಂಖ್ಯೆ) ಹೆಚ್ಚಿಸಲಿಕ್ಕಾಗಿ ಕಾರ್ಯಕ್ರಮವೊಂದರಲ್ಲಿ ಒಬ್ಬ ವ್ಯಕ್ತಿಗೆ ತನ್ನ ಮುಂದಿನ ಜನ್ಮದಲ್ಲಿ ಏನೇನಾಗಲಿದೆ ಎಂಬುದನ್ನು ತೋರಿಸುವ ಪ್ರಯತ್ನವನ್ನು ಮಾಡುತ್ತಿದೆ. ಈ ಕಾರ್ಯಕ್ರಮದಲ್ಲಿ ಒಬ್ಬ ವ್ಯಕ್ತಿಯನ್ನು ಹಿಂದೆ ಗತಿಸಿದ ಬೇರೊಬ್ಬ ವ್ಯಕ್ತಿಯ ಪುನರ್ಜನ್ಮ ಎಂದು ನಂಬಿಸಿ, ಆ ಗತಿಸಿದ ವ್ಯಕ್ತಿಯ ಆಸ್ತಿಯಲ್ಲಿ ಪಾಲು ಕೇಳುವ ಪ್ರಸಂಗಗಳೂ ಎದುರಾಗಿವೆ. ಇಂತಹ ಕಾರ್ಯಕ್ರಮಗಳನ್ನು ಕೇವಲ ಪ್ರಚಾರಕ್ಕಾಗಿ ಮಾಡಲಾಗುತ್ತದೆ. ಆದರೆ ಇದು ಈ ಜೀವನದಲ್ಲಿ ಸಂಕಷ್ಟ ಮತ್ತು ತೊಂದರೆಗಳನ್ನು ತಂದೊಡ್ಡಬಲ್ಲದು. ಕೆಲವರು ಯಾರಾದರೂ ತೊಂದರೆಗೀಡಾಗಿದ್ದರೆ ಅವರ ಈ ದುರವಸ್ಥೆಗೆ ಹಿಂದಿನ ಜನ್ಮದ ಫಲವೇ ಕಾರಣ ಎಂದು ಅದನ್ನು ಅವರು ಅನುಭವಿಸಲೇಬೇಕು ಎಂದು ಹೇಳಿ ಸಮರ್ಥಿಸುತ್ತಾರೆ. ವೇದಗಳಲ್ಲಿ ಜನ್ಮ-ಜನ್ಮಾಂತರವಾದ ಮತ್ತು ನಿರಂತರವಾಗಿ ಬರುವ ಪುನರ್ಜನ್ಮದ ಬಗ್ಗೆ ಉಲ್ಲೇಖಗಳು ಸಿಗುವುದಿಲ್ಲ. ಈ ರೀತಿಯ ಧಾರೆಗಳ ಪ್ರವೇಶ ಹಿಂದೂ ಧರ್ಮದ ಪರಿಷ್ಕೃತ ಯುಗದಲ್ಲಿ ಉಂಟಾಯಿತು. ಮಹಾನ್ ಪಂಡಿತ ರಾಹುಲ್ ಸಾಂಕೃತ್ಯಾಯನ್ ಇದರ ಔಚಿತ್ಯವನ್ನು ಪ್ರಶ್ನಿಸುತ್ತಾ ಈ ನಂಬಿಕೆಗಳು ಸಾಮಾಜಿಕ ಅತ್ಯಾಚಾರವನ್ನು ಮುಚ್ಚಿಹಾಕಲಿಕ್ಕಾಗಿ ಅಸ್ತಿತ್ವಕ್ಕೆ ಬಂದಿದೆ ಎಂದು ಬರೆಯುತ್ತಾರೆ. ಈ ಲೋಕದಲ್ಲೇ ಪುನಃ ಪುನಃ ಜನ್ಮ ತಾಳುವುದು ಶೋಷಿತರಿಗೆ ಮತ್ತಷ್ಟು ಶೋಷಣೆಯನ್ನುಂಟು ಮಾಡಬಹುದು. ಅವರೊಂದಿಗೆ ಇಂದಿನ ದುಃಖಗಳನ್ನು ನೀವು ಮರೆತುಬಿಡಿ ಎಂದು ಮಾತ್ರವಲ್ಲ, ನಿಮ್ಮ ಹಿಂದಿನ ಜನ್ಮದ ದುಃಖ, ಅತ್ಯಾಚಾರ, ನೋವುಗಳ ಕಾರಣದಿಂದಾಗಿ ಇಂದು ಈ ರೀತಿಯ ಜೀವನ ನಿಮಗೆ ಸಿಕ್ಕಿದೆ. ಈ ಸಂಕಷ್ಟಮಯ ಜೀವನದ ಹೊರತು ಬೇರೆ ಪುರಸ್ಕಾರ ಸಿಗಲಾರದು'' ಎಂದೂ ನಂಬಿಸಲಾಗುತ್ತದೆ.

(ದರ್ಶನ-ದಿಗ್ದರ್ಶನ, ಕಿತಾಬ್ ಮಹಲ್, 1992ರಲ್ಲಿ ಪ್ರಕಟಿತ, ಪುಟ ಸಂಖ್ಯೆ-403)

ಖ್ಯಾತ ಸಂತ ಸ್ವಾಮಿ ಪದ್‌ಮನ್‌ಜಿ ಮತ್ತು ಸ್ವಾಮಿ ಮಹೇಶ್ವರನಂದರು ಕೂಡಾ ಮನುಷ್ಯ ಮೋಕ್ಷಕ್ಕಾಗಿ 84ಲಕ್ಷ ಯೋನಿಗಳಲ್ಲಿ ಪರಿಭ್ರಮಣ ಹೊಂದಿ ಬರಬೇಕು ಎಂಬುದನ್ನು ಮಿಥ್ಯ ಎಂದು ಸಾರಿದ್ದಾರೆ. ಮಾತ್ರವಲ್ಲದೆ ಇದಕ್ಕೆ ತಾರ್ಕಿಕವಾದ ಸಮರ್ಥನೆ ಇಲ್ಲವೆಂದು ಬರೆದಿದ್ದಾರೆ. ಖ್ಯಾತ ಚಿಂತಕ ಎಮ್. ಎನ್. ರಾಯ್‌ಯವರ ವಿಚಾರದಲ್ಲಿ ಈ ಪುನರ್ಜನ್ಮದ ಕಲ್ಪನೆಯು ಸಮಾಜದಲ್ಲಿ ನಿಯತಿವಾದ ಜನ್ಮ ನೀಡುತ್ತದೆ ಮತ್ತು ಮನುಷ್ಯನನ್ನು ನಿಷ್ಕ್ರಿಯ ಮತ್ತು ಪೌರುಷಹೀನನಾಗಿ ಮಾಡುತ್ತದೆ. (ಇಂಡಿಯನ್ ಮೆಸೇಜ್ ಪುಟ ಸಂಖ್ಯೆ 14,151) ಪಂಡಿತ ಮಂಗಲದೇವ ವೇದಾಲಂಕಾರ್ ಅವರು ಯಮ್ ಔರ್ ಪಿತ್ರ್ ಎಂಬ ಹೆಸರಿನ ಪುಸ್ತಕದಲ್ಲಿ ಪ್ರಚಲಿತವಿರುವ ಪುನರ್ಜನ್ಮದ ಮಾನ್ಯತೆಯನ್ನು ಖಂಡಿಸುತ್ತಾರೆ. ಬೇರೆ ಕೆಲವು ವಿದ್ವಾಂಸರು ಕೂಡಾ(ಡಾ। ರಾಧಾಕೃಷ್ಣನ್, ಸತ್ಯಕಾಮ ವಿದ್ಯಾಲಂಕಾರ್) ತಮ್ಮ ಬುದ್ಧಿ ಮತ್ತು ವಿವೇಕವನ್ನು ಒರೆಗೆ ಹಚ್ಚಿ ಪರೀಕ್ಷಿಸಿದಾಗ ಈ ಕಲ್ಪನೆಯು ನಿಜವಲ್ಲ ಎಂದು ಸಾರಿರುವರು. ಅಮೇರಿಕದ ಅಧ್ವೈತ ಪಂಥದ ನೇತಾರ ಡಾ। ಐನ್‌ಸ್ಟೀವನ್ ಸನ್(ವರ್ಜೀನಿಯಾ ವಿಶ್ವವಿದ್ಯಾನಿಲಯ) ಇವರು ಚಿಲ್ಡ್ರನ್ ಹೂ ರಿಮೆಂಬರ್ ಪ್ರೀವಿಯಸ್ ಲೈವ್ಸ್(Children Who Remember Previous lives) ಎಂಬ ಪ್ರಖ್ಯಾತ ಪುಸ್ತಕವನ್ನು ಬರೆದಿದ್ದಾರೆ. ಪುನರ್ಜನ್ಮದ ಸತ್ಯತೆಯ ಬಗ್ಗೆ ವಾದಿಸುವವರು ಈ ಪುಸ್ತಕವನ್ನು ಮುಂದಿಡುತ್ತಾರೆ. ಆದರೆ ಇದರಲ್ಲೂ ಆ ವ್ಯಕ್ತಿ ಪ್ರತಿಯೊಂದು ಘಟನೆಯ ಬಗ್ಗೆ ತರ್ಕ ಮತ್ತು ಬುದ್ಧಿ ವಿವೇಕದ ಒರೆಗೆ ಹಚ್ಚಿ ಸರಿ ಎಂದು ಸಾಬೀತು ಪಡಿಸುವಲ್ಲಿ ವಿಫಲರಾಗಿದ್ದಾರೆ. ಇದರಿಂದಲೂ ಆತ್ಮ ಪುನಃ ಪುನಃ ಜನ್ಮ ತಾಳಿಬರುವ ಸಿದ್ಧಾಂತಕ್ಕೆ ಮಾನ್ಯತೆ ಸಿಗುತ್ತಿಲ್ಲ.

## ಘಟನೆಗಳನ್ನು ಪರೀಕ್ಷಿಸಿದಾಗ

ಭಾರತ ದೇಶದಲ್ಲಿ ಅನೇಕ ವಿದ್ವಾಂಸರು ನಿಜವೆಂದು ನಂಬಲಾಗುತ್ತಿರುವ ಪುನರ್ಜನ್ಮ ಸಂಬಂಧಿ ಕೆಲವು ಘಟನೆಗಳ ಆಧಾರದಲ್ಲಿ ಈ ವಿಷಯವನ್ನು ಬೌದ್ಧಿಕ ರೂಪದಲ್ಲಿ ಅಧ್ಯಯನ ನಡೆಸಿದ್ದಾರೆ. ರಾಯ್ ಬಹದ್ದೂರ್, ಶ್ಯಾಮ್ ಸುಂದರ್‌ಲಾಲ್, ಕೆ.ಕೆ.ಎನ್. ಸಹಾಯ್, ತಾರಾಚಂದ್ ಮಾಥುರ್, ಡಾ। ಎಮ್. ಪಿ. ಬೋಸ್, ಲಾಲಾ ದೇಶ್‌ಬಂದ್ ಗುತ್ತು, ಪ್ರೊ. ಅಜಯ್, ಡಾ। ಕೇದಾರ್, ಡಾ। ಕೀರ್ತಿ ಸ್ವರೂಪ್ ರಾವತ್, ಡಾ। ಎಲ್.ಪಿ. ಮೆಹ್‌ರೋತ್ರ, ಪಂಡಿತ್ ನೇಕೀರಾಮ್ ಶರ್ಮಾ ಮುಂತಾದ ವಿದ್ವಾಂಸರು ಈ ವಿಷಯದ ಬಗ್ಗೆ ಬರೆದಿದ್ದಾರೆ. ಆದರೆ ಇದರ ಅಧ್ಯಯನದಿಂದ ಯಾವ ಪ್ರಶ್ನೆ ಉದ್ಭವಿಸುತ್ತದೆಯೋ ಅದನ್ನು ಸ್ವಯಂ ಬುದ್ಧಿ ಮತ್ತು ವಿವೇಕದ ಒರೆಗಲ್ಲಿಗೆ ಹಚ್ಚದೆ ಬಿಟ್ಟು ಬಿಟ್ಟಿದ್ದಾರೆ.

ಆತ್ಮ ಮತ್ತು ಪುನರ್ಜನ್ಮದ ಬಗ್ಗೆ ಇರುವ ಈ ರೀತಿಯ ನಂಬಿಕೆಗಳಿಗೆ ಇಸ್ಲಾಮ್, ಕ್ರೈಸ್ತ, ಬೌದ್ಧ ಮತ್ತಿತರ ಧರ್ಮಗಳಲ್ಲಿ ಮಾನ್ಯತೆ ಇಲ್ಲ. ಹಿಂದೂ ಮತ್ತು ಕೆಲವು ಧರ್ಮಗಳಲ್ಲಿ

ಈ ರೀತಿಯ ನಂಬಿಕೆ ಇದೆ. ಈ ವಿಷಯದಲ್ಲಿ ಜನರನ್ನು ವಿವಶರನ್ನಾಗಿಸುವ ಪ್ರಯತ್ನ ಬಹಳ ದೀರ್ಘಕಾಲದಿಂದ ನಡೆಯುತ್ತಾ ಬಂದಿದೆ. ಆದರೆ ವಿವಶರನ್ನಾಗಿಸುವ ಎಲ್ಲ ಪ್ರಯತ್ನಗಳಲ್ಲೂ ಅಸಫಲರಾಗಿದ್ದಾರೆ ಎಂಬುದನ್ನು ಮರೆಯಬಾರದು. ಈ ವಿಷಯಕ್ಕೆ ಸಂಬಂಧಿಸಿ ವೈಜ್ಞಾನಿಕ ಸತ್ಯವನ್ನು ಹೊರಗೆಡಹಲು 1965ರಲ್ಲಿ ರಾಜಸ್ಥಾನ ವಿಶ್ವವಿದ್ಯಾನಿಲಯದಲ್ಲಿ ಪುರಾವೆಗೆ ಸಂಬಂಧಿಸಿ ವಿಜ್ಞಾನದ ವಿಭಾಗವನ್ನು ಆರಂಭಿಸಲಾಯಿತು. ಖ್ಯಾತ ವಿಜ್ಞಾನಿ ಡಾ। ಎಚ್.ಎನ್. ಬ್ಯಾನರ್ಜಿಯವರನ್ನು ಈ ವಿಭಾಗದ ಮುಖ್ಯಸ್ಥರನ್ನಾಗಿ ಮಾಡಲಾಯಿತು.

ಡಾ। ಬ್ಯಾನರ್ಜಿ ಬಹಳ ಪ್ರತಿಭಾವಂತರಾಗಿದ್ದರು. ಸಂಶೋಧನೆಗಳು ಸತ್ಯಾಧಾರಿತವಾಗಿರಬೇಕೆಂಬುದರ ಪ್ರಬಲ ಪ್ರತಿಪಾದಕರಾಗಿದ್ದರು. ಅವರು ನೂರಕ್ಕೂ ಅಧಿಕ 'ಪುನರ್ಜನ್ಮ'ದ ಕೇಸುಗಳನ್ನು ತಮ್ಮ ಸಂಶೋಧನೆಗೆ ಒಳಪಡಿಸಬಯಸಿದ್ದರು. ಇದನ್ನು ಅವರು ತಮ್ಮ ಪುಸ್ತಕದಲ್ಲಿ ಅನೇಕ ಬಾರಿ ಪ್ರಸ್ತಾಪಿಸಿದ್ದಾರೆ. ಈ ಶೋಧಕಾರ್ಯಕ್ಕಾಗಿ ತಂಡಗಳನ್ನು ರಚಿಸಿಕೊಂಡರು. ಈ ತಂಡಗಳು ಘಟನೆ ನಡೆದಿದೆ ಎನ್ನಲಾಗುವ ಸ್ಥಳಕ್ಕೆ ಹೋಗಿ ಶೋಧ ಕಾರ್ಯ ನಡೆಸಿತು. ಅನೇಕ ಸ್ಥಳಗಳಿಗೆ ಡಾ। ಬ್ಯಾನರ್ಜಿಯವರು ಸ್ವಯಂ ಹೋದರು. ಉದಾಹರಣೆಗೆ ಡಾ। ಬ್ಯಾನರ್ಜಿಯವರು ತಮ್ಮ ತಂಡದೊಂದಿಗೆ ಟರ್ಕಿಗೆ ಹೋದರು. ಈ ತಂಡದಲ್ಲಿ ಖ್ಯಾತ ವೈದ್ಯರು ಮತ್ತು ಮನೋವಿಜ್ಞಾನಿಗಳೂ ಇದ್ದರು. ಬಹಳ ಪೂರ್ವ ಸಿದ್ಧತೆಯೊಂದಿಗೆ ಅವರು ಟರ್ಕಿಗೆ ಹೋಗಿದ್ದರು. ಅಲ್ಲಿಯ ಅಡಾನಾ ಜಿಲ್ಲೆಯಲ್ಲಿ 1956ರಲ್ಲಿ ಇಸ್ಮಾಈಲ್ ಎಂಬ ವ್ಯಕ್ತಿ ಪುನರ್ಜನ್ಮ ಹೊಂದಿದ್ದಾರೆ ಎಂಬ ವಿಷಯವು ಬಹಳ ಪ್ರಚಾರ ಪಡೆದುಕೊಂಡಿತ್ತು. ಅನೇಕರು ಈ ಘಟನೆಯನ್ನು ಪುನರ್ಜನ್ಮವು ಸತ್ಯ ಎಂಬುದಕ್ಕೆ ಬಹಳ ಪ್ರಬಲ ಆಧಾರವೆಂದು ತಿಳಿಯುತ್ತಿದ್ದರು. ಯಾವ ಪ್ರದೇಶದಲ್ಲಿ 'ಇಸ್ಮಾಈಲ್' ಎಂಬ ವ್ಯಕ್ತಿ ಇದ್ದಾನೆಂದು ಹೇಳಲಾಗುತ್ತಿತ್ತೋ ಡಾ। ಬ್ಯಾನರ್ಜಿಯವರ ತಂಡಕ್ಕೆ ಆ ವ್ಯಕ್ತಿಯಾಗಲೀ ಸ್ಥಳವಾಗಲೀ ಸಿಗಲೇ ಇಲ್ಲ. ಆದರೆ ಈ ಘಟನೆ ಕೆಲವೇ ವರ್ಷಗಳ ಹಿಂದೆ ನಡೆದಿದೆ ಎನ್ನಲಾಗುತ್ತಿತ್ತು.

ಬಹಳ ಪ್ರಯತ್ನ ಪಟ್ಟರೂ ಡಾ। ಬ್ಯಾನರ್ಜಿಯವರಿಗೆ ಅಂತಹ 'ಇಸ್ಮಾಈಲ'ನ ಪತ್ತೆಯಾಗಲಿಲ್ಲ. ಈ ಘಟನೆಯ ವಿವರಣೆಯನ್ನು ಅವರು ತಮ್ಮ ಶೋಧನೆಯಲ್ಲಿ ಉಲ್ಲೇಖಿಸಿದ್ದಾರೆ. ಅವರು ಕೈಗೆತ್ತಿಕೊಂಡ ಪುನರ್ಜನ್ಮದ ಬಗೆಗಿನ ನೂರಕ್ಕೂ ಅಧಿಕ ಕೇಸುಗಳ ಪರಿಸ್ಥಿತಿ ಏನಾಯಿತು? ಎಲ್ಲವೂ ಪುನರ್ಜನ್ಮದ ಕಲ್ಪನೆಯನ್ನೇ ನುಚ್ಚುನೂರುಗೊಳಿಸಿಬಿಟ್ಟವು. ಯಾವುದೂ ಸತ್ಯವೆಂದು ಸಾಬೀತಾಗಲಿಲ್ಲ. ಆದರೆ ಕೆಲವರಿಗೆ ಡಾ। ಬ್ಯಾನರ್ಜಿಯವರ ಆಲೋಚನಾ ಶೈಲಿ ಹಿಡಿಸಲಿಲ್ಲ. ಅವರನ್ನು ಪದಚ್ಯುತಗೊಳಿಸಲಾಯಿತು. 1968ರಲ್ಲಿ ಆ ವಿಭಾಗ ಅಜ್ಞಾತ ರೀತಿಯಲ್ಲಿ ಮುಚ್ಚಲ್ಪಟ್ಟಿತು.

## ವೈಜ್ಞಾನಿಕತೆಯ ಅಭಾವ

ಪುನರ್ಜನ್ಮದ ಕುರಿತ ಘಟನೆಗಳು ಇದುವರೆಗೂ ಸತ್ಯವೆಂದು ಸಾಬೀತಾಗಿಲ್ಲ, ಇದಕ್ಕೆ ವೈಜ್ಞಾನಿಕ ಆಧಾರಗಳೂ ಲಭ್ಯವಿಲ್ಲ, ಏಕೆಂದರೆ ಪುನರ್ಜನ್ಮವೆಂಬುದು ಇಲ್ಲ ಎಂಬುದೇ ಇದಕ್ಕಿರುವ ಕಾರಣವಾಗಿದೆ. 1968ರ ಅಕ್ಟೋಬರ್ 7ರಂದು ಪ್ರಕಟವಾದ ಒಂದು ಪತ್ರಿಕೆಯ ವರದಿಯ ಪ್ರಕಾರ ಮಾನಸಿಕ ತಜ್ಞರ ಸಂಶೋಧನೆಗಳ ಪ್ರಕಾರ ತನ್ನ ಪುನರ್ಜನ್ಮದ ಕುರಿತು ಮಾತನಾಡುತ್ತಾನೆ ಎನ್ನಲಾಗುವ ವ್ಯಕ್ತಿಗಳು ಮಾನಸಿಕ ಅಸ್ವಸ್ಥತೆಯ(Psychic hysteria) ರೋಗದಿಂದ ಬಳಲುತ್ತಿದ್ದಾರೆ ಮತ್ತು ಇದರ ಪರಿಣಾಮದಿಂದಾಗಿಯೇ ಈ ರೀತಿಯ ಮಾತುಗಳನ್ನಾಡುತ್ತಾರೆ. ಜಯಪುರದ ಮಾನಸಿಕ ತಜ್ಞರಾದ ಡಾ। ಬಿ.ಕೆ. ವ್ಯಾಸ್ ಮತ್ತು ವಿಶೇಷ ತಜ್ಞರಾದ ಶ್ರೀ ರತ್ನಸಿಂಹರ ಪ್ರಕಾರ ಅವರು ಇಂತಹ ರೋಗಿಗಳನ್ನು ಚಿಕಿತ್ಸೆಗೊಳಪಡಿಸಿದ್ದಾರೆ. ಈಗ ಸಂಪೂರ್ಣ ಆರೋಗ್ಯವಂತರಾಗಿದ್ದಾರೆ. ಡಾ। ವ್ಯಾಸ್‌ರವರು ಯುನೈಟೆಡ್ ನ್ಯೂಸ್ ಆಫ್ ಇಂಡಿಯಾಕ್ಕೆ ನೀಡಿದ ಸಂದರ್ಶನವೊಂದರಲ್ಲಿ ಪುನರ್ಜನ್ಮ ಎನ್ನಲಾಗುವ ಘಟನೆಗಳನ್ನು ಉಲ್ಲೇಖಿಸುತ್ತ, ಇಂತಹ ವ್ಯಕ್ತಿಗಳ ಮಾನಸಿಕ ಸ್ಥಿತಿ ಸಂತುಲಿತವಾಗಿರುವುದಿಲ್ಲ ಎಂದು ಹೇಳಿದ್ದಾರೆ. ಸಾಮಾನ್ಯವಾಗಿ ಇದು ವ್ಯಕ್ತಿಗತ ಸಮಸ್ಯೆಗಳಾಗಿರುತ್ತವೆ. ಮಾನಸಿಕ ಅಸ್ವಸ್ಥತೆಯ ಕಾರಣದಿಂದ ವ್ಯಕ್ತಿ ತಾನು ಬೇರೆಯೇ ವ್ಯಕ್ತಿ ಎಂದುಕೊಳ್ಳಬಯಸುತ್ತಾರೆ. ಇಂತಹ ಕಪೋಲ ಕಲ್ಪಿತ ಮಾತುಗಳ ಮೂಲಕ ಲಾಭ ಗಳಿಸ ಬಯಸುತ್ತಾರೆ. (ಹಿಂದೂಸ್ತಾನ್ ಟೈಮ್ಸ್, ನವದೆಹಲಿ)

ತಮ್ಮ ವಾದವನ್ನು ಸಮರ್ಥಿಸಲು ಅವರು ಕೆಲವು ಕೇಸುಗಳ ವಿವರಣೆಯನ್ನು ನೀಡಿರುವರು.

ದೇಶದಲ್ಲಿ ತಮ್ಮ ಪುನರ್ಜನ್ಮದ ಬಗ್ಗೆ ವಾದಿಸುತ್ತಿರುವ ಯಾವೆಲ್ಲ ಘಟನೆಗಳು ನಡೆದಿವೆಯೋ ಒಂದೋ ಅವರು ಮಾನಸಿಕ ಅಸ್ವಸ್ಥತೆಯಿಂದ ಬಳಲುತ್ತಿರುತ್ತಾರೆ ಅಥವಾ ಯಾವುದಾದರೂ ಲಾಭಕ್ಕಾಗಿ ಈ ರೀತಿಯ ಕಪೋಲಕಲ್ಪಿತ ಕತೆಗಳನ್ನು ಮುಂದಿರಿಸಿ ಪುನರ್ಜನ್ಮದ ಘಟನೆಗಳು ಸಂಭವಿಸುತ್ತಿದೆ ಎಂದು ಪ್ರಚಾರ ಪಡಿಸುತ್ತಾರೆ. ಇಂತಹ ಒಂದು ಘಟನೆಯನ್ನು ಉಲ್ಲೇಖಿಸುತ್ತಾ ಡಾ। ವ್ಯಾಸ್‌ರವರು ಈ ರೀತಿ ಬರೆಯುತ್ತಾರೆ. ಇದು ಒಬ್ಬ ಬಾಲಕನಿಗೆ ಸಂಬಂಧಿಸಿದ ಘಟನೆ. ಇದರಲ್ಲಿ ಬಾಲಕನ ಸಹೋದರಿಗೆ ಪುನರ್ಜನ್ಮದ ಸ್ಮೃತಿ ಇತ್ತು. ಅವನಿಗೆ ತನ್ನ ಸಹೋದರಿಯ ಬಗ್ಗೆ ಅಸೂಯೆ ಆರಂಭವಾಯಿತು ಮತ್ತು ಅವನು ತನ್ನನ್ನು ಮಹಾತ್ಮಾ ಗಾಂಧಿಯವರ ಪುನರ್ಜನ್ಮ ಎಂದು ಹೇಳಲಾರಂಭಿಸಿದನು. ಅವನು ಒಂದು ಪುಸ್ತಕದಲ್ಲಿ ಮಹಾತ್ಮಾಗಾಂಧಿಯವರ ಜೀವನದ ಕುರಿತು ಓದಿದ್ದನು. ಅದರ

ಆಧಾರದಲ್ಲಿ ವಿಷಯಗಳನ್ನು ಹೇಳಲಾರಂಭಿಸಿದನು. ಜನರಿಗೆ ಈ ವಿಷಯ ಸಿಕ್ಕಿದಾಗ ಗಾಂಧೀಜಿಯವರ ಪುನರ್ಜನ್ಮವಾಗಿದೆ ಎಂದು ದೊಡ್ಡ ಸಂಖ್ಯೆಯ ಜನರು ಅಲ್ಲಿ ಬಂದು ಸೇರಲಾರಂಭಿಸಿದರು. ಕಾಂಗ್ರೆಸಿನ ದೊಡ್ಡ ದೊಡ್ಡ ನೇತಾರರೇ ಬಂದಿದ್ದರು. ಸುಶೀಲ್ ನಯ್ಯರ್ ಕೂಡಾ ಇವರಲ್ಲೊಬ್ಬರು. ಇದರಿಂದ ಬಾಲಕನಿಗೆ ಪ್ರಸಿದ್ಧಿ ದೊರೆಯಿತು. ಕೊನೆಯಲ್ಲಿ ಬಾಲಕನ ವಾದವು ಸುಳ್ಳು ಎಂದು ಸಾಬೀತಾಯಿತು.

## ನ್ಯಾಯಾಲಯದ ಐತಿಹಾಸಿಕ ನಿರ್ಣಯ

1978ರಲ್ಲಿ 'ಆತ್ಮ ಮತ್ತು ಪುನರ್ಜನ್ಮ' ಎಂಬ ಪುಸ್ತಕದಲ್ಲಿ ಆತ್ಮದ ಪುನರ್ಜನ್ಮ ಮತ್ತು ಜನ್ಮ ಜನ್ಮಾಂತರವಾದದ ಬಗ್ಗೆ ಲೇಖಕಿ ಸೀಮಾ ಸಬ್‌ಲೋಕ್ ಎಂಬವರು ಒಂದು ಲೇಖನ ಬರೆದರು. ಅವರು ಈ ಲೇಖನದಲ್ಲಿ ಆತ್ಮ ಮತ್ತು ಪುನಃ ಪುನಃ ಬರುವ ಪುನರ್ಜನ್ಮದ ಪೊಳ್ಳುತನವನ್ನು ವಿಜ್ಞಾನದ ಆಧಾರದಲ್ಲಿ ಸುಳ್ಳೆಂದು ಸಾಬೀತು ಪಡಿಸಿದ್ದರು.

ಪ್ರತಿವಾದಿಯು ದೆಹಲಿಯ ತೀಸ್ ಹಝಾರಿ ನ್ಯಾಯಾಲಯದಲ್ಲಿ ಇದು ಧಾರ್ಮಿಕ ನಂಬಿಕೆಗಳ ಮೇಲೆ ನಡೆಸಿದ ಪ್ರಹಾರವಾಗಿದೆ ಮತ್ತು ಜನರ ಭಾವನೆಗಳನ್ನು ನೋಯಿಸಿದೆಯೆಂದು ದೂರು ಸಲ್ಲಿಸಿದರು. ದೂರನ್ನು ವಿಭಿನ್ನ ದೃಷ್ಟಿಕೋನಗಳಿಂದ ಪರಿಶೀಲಿಸಿದ ಬಳಿಕ 1983ರ ಡಿಸೆಂಬರ್ 2ರಂದು ನ್ಯಾಯಾಲಯವು ಈ ದೂರನ್ನು ವಜಾಗೊಳಿಸಿ ತೀರ್ಪು ಪ್ರಕಟಿಸಿತು. 'ವಿಜ್ಞಾನದ ಈ ಯುಗದಲ್ಲಿ ಆತ್ಮದ ಅಸ್ತಿತ್ವ ಮತ್ತು ಪುನರ್ಜನ್ಮ ಸಿದ್ಧಾಂತದ ಬಗ್ಗೆ ಸಂಶಯ ಪಡಲು ಪ್ರತಿಯೊಬ್ಬರಿಗೂ ಅಧಿಕಾರವಿದೆ. ಹೀಗೆ ಮಾಡುವುದರಿಂದ ಆಧುನಿಕ ಮತ್ತು ಸುಧಾರಿತ ವಿಚಾರಧಾರೆಯೆಡೆಗೆ ಮುಂದಡಿಯಿಟ್ಟಂತಾಗುತ್ತದೆ. ಈ ರೀತಿ ಮಾಡಲು ಭಾರತೀಯ ಸಂವಿಧಾನದ 51ನೇ ಪರಿಚ್ಛೇದದಲ್ಲಿ ಸ್ಪಷ್ಟ ನಿರ್ದೇಶನಗಳಿವೆ. ಈ ಸಂವಿಧಾನ ಬದ್ಧ ಹಕ್ಕನ್ನು ಉಪಯೋಗಿಸಿಯೇ ಲೇಖಕಿ ಜನರನ್ನು ವಿಚಾರವಂತರನ್ನಾಗಿಸಲು ಪ್ರಯತ್ನಿಸಿದ್ದಾರೆ. ಈ ರೀತಿ ಮಾಡಿದಾಗ ಅವರ ಮೇಲೆ ಹಿಂದೂಗಳ ಭಾವನೆಗಳಿಗೆ ನೋವುಂಟು ಮಾಡಿದರೆಂದು ಆರೋಪ ಹೊರಿಸಲಾಯಿತು. ಇದು ದುಃಖ ಸತ್ಯ ಸುದೀರ್ಘ ಸಮಯದವರೆಗೆ ಅವರು ಮೊಕದ್ದಮೆಗಳನ್ನು ಎದುರಿಸಬೇಕಾಗಿ ಬಂತು. ಜನರಿಗೆ ಸತ್ಯವನ್ನು ತಿಳಿಸುವ ಪ್ರಯತ್ನವನ್ನಷ್ಟೇ ಲೇಖಕಿ ಈ ಮೂಲಕ ಮಾಡಬಯಸಿದ್ದರು. ಉದ್ದೇಶ ಪೂರ್ವಕವಾಗಿ ಜನರ ಭಾವನೆಗಳಿಗೆ ನೋವುಂಟು ಮಾಡಬೇಕೆಂದು ಅವರು ಬಯಸಿರಲಿಲ್ಲ, ಕ್ರೈಸ್ತ, ಇಸ್ಲಾಮ್ ಮತ್ತು ಬೌದ್ಧ ಧರ್ಮಗಳ ಜೊತೆ ಇನ್ನೂ ಕೆಲವು ಧರ್ಮಗಳು ಆತ್ಮ ಮತ್ತು ಪುನರ್ಜನ್ಮದ(ಜನ್ಮ ಜನ್ಮಾಂತರವಾದ) ಈ ಸಿದ್ಧಾಂತವನ್ನು ನಂಬುವುದಿಲ್ಲ.

## ಕೆಲವು ಸಹಜ ಪ್ರಶ್ನೆಗಳು

ಜನ್ಮ ಜನ್ಮಾಂತರವಾದ ಮತ್ತು ಪುನಃ ಪುನಃ ಜನ್ಮ ತಳೆಯುವ ಪುನರ್ಜನ್ಮವಾದಕ್ಕೆ ಯಾವುದೇ ವೈಜ್ಞಾನಿಕ, ಬೌದ್ಧಿಕ ಮತ್ತು ವ್ಯಾವಹಾರಿಕ ಪುರಾವೆಗಳು ಲಭ್ಯವಿಲ್ಲದೆ ಇರುವಾಗ, ಕೆಲವು ಪ್ರಶ್ನೆಗಳು ಸಹಜವಾಗಿಯೇ ಉಂಟಾಗುತ್ತದೆ.

* ಮನುಷ್ಯ ಮಾಡಿದ ಒಳಿತು, ಕೆಡುಕುಗಳಿಗೆ ಪುರಸ್ಕಾರ ಮತ್ತು ಶಿಕ್ಷೆಯು ಸಿಗಬೇಕು ಎನ್ನುವುದು ಪ್ರಕೃತಿಯ ಬೇಡಿಕೆಯಾಗಿದೆ. ಮನುಷ್ಯನನ್ನು ಪಶು-ಪಕ್ಷಿಯ ಹಾಗೆ ರೂಪಾಂತರಗೊಳಿಸಿದರೆ ಇದು ಸಾಧ್ಯವಿಲ್ಲ, ಈ ನಂಬಿಕೆಯ ಪ್ರಕಾರ ಮನುಷ್ಯ ತನ್ನ ಯಾವ ಒಳಿತು-ಕೆಡುಕುಗಳಿಗಾಗಿ ಈ ರೀತಿ ಪ್ರಾಣಿ-ಪಕ್ಷಿಯ ರೂಪ ತಾಳಿದ್ದಾನೆ ಎಂಬುದೂ ಅರ್ಥವಾಗುವುದಿಲ್ಲ, ಇದಕ್ಕಾಗಿ ಮನುಷ್ಯನಿಗೆ ಪುನರ್ಜೀವನ ಲಭಿಸಬೇಕು. ಆದರೆ ಪುನಃ ಅದು ಪುನಃ ರೂಪಾಂತರಗೊಂಡು ಬರುವ ಪುನರ್ಜೀವನವಲ್ಲ, ಮನುಷ್ಯನಿಗೆ ಅರ್ಥವಾಗುವಂತೆ ಅವನ ಒಳಿತು-ಕೆಡುಕುಗಳ ಪರಿಣಾಮ ತಿಳಿದು ಬರುವಂತಹ ಪುನರ್ಜೀವನ. ಇಸ್ಲಾಮಿನ ಪರಲೋಕ ಪರಿಕಲ್ಪನೆಯಲ್ಲಿ ಇದಕ್ಕೆ ಅವಕಾಶಗಳಿವೆ.

* ಸರಿಯಾದ ನ್ಯಾಯ ತೀರ್ಮಾನಕ್ಕೆ ಪರಲೋಕ ಜೀವನವು ಅನಿವಾರ್ಯವಾಗಿದೆ.

* ನಿರಂತರವಾಗಿ ಹುಟ್ಟಿ ಬರುವ ಪುನರ್ಜನ್ಮದ ಕಲ್ಪನೆಯ ಪ್ರಕಾರ ಪಶು ಪಕ್ಷಿಗಳು, ಮರಗಿಡಗಳು, ಮನುಷ್ಯನ ಪಾಪ ಕರ್ಮದಿಂದ ಪಡೆದ ಪರಿಣಾಮಗಳಾಗಿವೆ. ಹಾಗಿದ್ದಲ್ಲಿ ಮನುಷ್ಯನಿಗೆ ಉಪಕಾರಿಯಾದ ಈ ಜೀವಿಜಂತುಗಳ ಸಂಖ್ಯೆ ಹೆಚ್ಚಬೇಕಿದ್ದರೆ ಮನುಷ್ಯ ಸದಾ ಕೆಡುಕುಗಳನ್ನು ಮಾಡುತ್ತಿರಬೇಕೇ?

* ಮನುಷ್ಯನ ಕರ್ಮಗಳ ಪರಿಣಾಮ ಅವನ ಮರಣಾನಂತರವೂ ಮುಂದುವರಿಯುತ್ತದೆ. ಆದುದರಿಂದ ಮನುಷ್ಯನ ಒಳ್ಳೆಯ ಮತ್ತು ಕೆಟ್ಟ ಕೆಲಸಗಳು ಮುಂದಿನ ತಲೆಮಾರಿನ ಮೇಲೆ ಯಾವ ರೀತಿಯ ಪ್ರಭಾವವನ್ನುಂಟುಮಾಡಿದೆ ಎಂಬುದನ್ನು ಪರಿಗಣಿಸಿ, ಅದರ ಲಾಭ-ನಷ್ಟಗಳನ್ನು ಸಂಬಂಧಿತ ವ್ಯಕ್ತಿಯ ಖಾತೆಯಲ್ಲಿ ಜಮೆಗೊಳಿಸಬೇಕೆಂಬುದು ಬುದ್ಧಿಯ ಬೇಡಿಕೆಯಾಗಿದೆ. ಇದಕ್ಕೆ ಸರಿಯಾದ ಪುರಸ್ಕಾರ ಮತ್ತು ಶಿಕ್ಷೆ ಈ ಸೀಮಿತ ಲೋಕದಲ್ಲಿ ಸಿಗುವುದು ಸಾಧ್ಯವಿಲ್ಲ.

* ಒಂದು ವೇಳೆ ಮನುಷ್ಯನಿಗೆ ನಾನು ಹಿಂದಿನ ಜನ್ಮದ ಪಾಪ ಪುಣ್ಯಗಳ ಪರಿಣಾಮವನ್ನು ಇದೀಗ ಈ ಜನ್ಮದಲ್ಲಿ ಅನುಭವಿಸುತ್ತಿದ್ದೇನೆ ಎಂದು ತಿಳಿದು ಬಂದರೆ, ಆಗ ಅವನ ಈ ನಂಬಿಕೆಯ ಪರಿಣಾಮಗಳು ಅವನ ಜೀವನದಲ್ಲಿ ಕಂಡುಬರುವುದು. ಅವನಲ್ಲಿ ಆತ್ಮಾಭಿಮಾನ, ಪೌರುಷ ಸ್ವಾಭಿಮಾನ ಕುಂಠಿತಗೊಳ್ಳಬಹುದು. ಅವನು ಸದಾ ವ್ಯಾಕುಲಚಿತ್ತನಾಗಬಹುದು. ಹತಾಶೆ ಮತ್ತು ಪಶ್ಚಾತ್ತಾಪದಿಂದ ಬೇಯುತ್ತಿರಬಹುದು.

ಅವನಿಗೆ ಔನ್ನತ್ಯವನ್ನು ತಲುಪಲೂ ಸಾಧ್ಯವಾಗಲಾರದು.

✱ ಜನರಲ್ಲಿ ಅಹಂಕಾರವು ಹೆಚ್ಚಾಗಬಹುದು, ಶ್ರೀಮಂತರು ಬಡವರೊಂದಿಗೆ ಕೆಟ್ಟ ರೀತಿಯಲ್ಲಿ ವರ್ತಿಸಬಹುದು. ಅವರೊಂದಿಗೆ ನೀಚ ಭಾವನೆ ತೋರಿಸಬಹುದು. ಈ ರೀತಿಯಾದರೆ ಸಮಾಜವು ಉಚ್ಚ-ನೀಚತೆ, ಅಸ್ಪೃಶ್ಯತೆಗಳಿಂದ ನಲುಗಿಬಿಡಬಹುದು.

## ಪುನರ್ಜೀವನದ ಇಸ್ಲಾಮೀ ಪರಿಕಲ್ಪನೆ

ಇಸ್ಲಾಮ್ ಸಂಪೂರ್ಣ ಜೀವನ ವ್ಯವಸ್ಥೆಯಾಗಿದೆ. ಇದರ ಶಿಕ್ಷಣಗಳು ಮನುಷ್ಯನಿಗೆ ಸದಾ ಕಲ್ಯಾಣಕಾರಿಯಾಗಿದೆ ಮತ್ತು ಮೋಕ್ಷದ ದಾರಿಯನ್ನು ತೋರಿಸುತ್ತದೆ. ಈ ಜಗತ್ತಿನಲ್ಲಿ ಮನುಷ್ಯ ತನ್ನ ಉತ್ತಮ ಕೆಲಸಗಳಿಗೆ ತಕ್ಕ ಪುರಸ್ಕಾರ ಮತ್ತು ಕೆಡುಕುಗಳಿಗೆ ತಕ್ಕ ಶಿಕ್ಷೆಯನ್ನು ಸಂಪೂರ್ಣವಾಗಿ ಪಡೆಯಲು ಸಾಧ್ಯವಿಲ್ಲ ಎಂಬುದು ಒಂದು ವಾಸ್ತವಿಕತೆಯಾಗಿದೆ. ಇದಕ್ಕೆ ಪರಲೋಕ ಜೀವನವು ಅನಿವಾರ್ಯವಾಗಿ ಬೇಕು. ವಿಶ್ವದ ಎಲ್ಲ ಪ್ರಮುಖ ಧರ್ಮಗಳಲ್ಲಿ ಪರಲೋಕದ ಪರಿಕಲ್ಪನೆಯನ್ನು ನೋಡಬಹುದಾಗಿದೆ. ಇಸ್ಲಾಮಿನ ಪಾರಿಭಾಷಿಕದಲ್ಲಿ ಪರಲೋಕ ಜೀವನವನ್ನು ಆಖಿರತ್ ಎಂದು ಕರೆಯಲಾಗುತ್ತದೆ.

ಇಸ್ಲಾಮಿನ ಪ್ರಕಾರ ಮನುಷ್ಯನ ಈ ಲೋಕದ ಜೀವನವು ಪರೀಕ್ಷೆಯ ಅವಧಿಯಾಗಿದೆ. ಇದು ನಶ್ವರವಾದ ಜಗತ್ತು. ಒಂದಲ್ಲ ಒಂದು ದಿನ ಇದು ಸಂಪೂರ್ಣ ನಾಶ ಹೊಂದುತ್ತದೆ. ಶಾಶ್ವತವಾದ ಜೀವನವು ಪರಲೋಕ(ಆಖಿರತ್) ಜೀವನವಾಗಿದೆ. ಶಾಶ್ವತ ಜೀವನಕ್ಕೆ ಬೇಕಾದ ತಯಾರಿಯನ್ನು ನಡೆಸಲು ಮನುಷ್ಯನಿಗೆ ಇಲ್ಲಿನ ಜೀವನವನ್ನು ನೀಡಲಾಗಿದೆ. ಒಂದು ವೇಳೆ ಮನುಷ್ಯ ಏಕ ದೇವನ ಮೇಲೆ, ಪ್ರವಾದಿಗಳ ಮೇಲೆ, ಪರಲೋಕದ ಮೇಲೆ ವಿಶ್ವಾಸವಿರಿಸುತ್ತಾ ತನ್ನ ಜೀವನವನ್ನು ದೇವನ ಆದೇಶದಂತೆ ಪಾಲಿಸುತ್ತಾ, ಸತ್ಕರ್ಮಗಳನ್ನು ಮಾಡುತ್ತಾ ಜೀವಿಸುತ್ತಾನೆ ಎಂದಾದರೆ, ಅವನಿಗೆ ಇದಕ್ಕೆ ಉತ್ತಮ ಪ್ರತಿಫಲ ಮತ್ತು ಸ್ವರ್ಗ(ಜನ್ನತ್) ಸಿಗುತ್ತದೆ. ಅಲ್ಲಿ ಅವನಿಗೆ ನಿಜವಾದ ಜೀವನ, ಶಾಂತಿ ಸಮಾಧಾನ, ಸುಖ, ಆರಾಮ ಅಮರತ್ವ ಸಿಗುತ್ತದೆ. ಅದು ಈ ಜೀವನದ ವಿಕಸಿತ ರೂಪವಾಗಿರುವುದು. ಅಲ್ಲಿ ಏನೂ ಕುಂದುಕೊರತೆ ಇರಲಾರದು. ಸತ್ಕರ್ಮಗಳನ್ನು ಮಾಡಿದವರು ಅಲ್ಲಿ ಶಾಶ್ವತವಾಗಿ ಉಳಿಯುವರು. ಇದಕ್ಕೆ ವ್ಯತಿರಿಕ್ತವಾಗಿ ಮಿಥ್ಯ ನಂಬಿಕೆ, ಆಚಾರಗಳಲ್ಲಿ ತೊಡಗಿಕೊಂಡವರಿಗೆ ನರಕ(ಜಹನ್ನಮ್) ಸಿಗುವುದು. ಧಗಧಗಿಸುವ ಅಗ್ನಿಯಲ್ಲಿ ಅವರನ್ನು ಎಸೆಯಲಾಗುವುದು ಮತ್ತು ಅಲ್ಲಿ ಸದಾ ಉರಿಯಬೇಕಾಗಿ ಬರುವುದು. ದುಷ್ಕರ್ಮ ಮಾಡಿದ ವ್ಯಕ್ತಿಗಳು ವಿವಿಧ ರೀತಿಯ ಶಿಕ್ಷೆಗಳಿಂದ ಜರ್ಝರಿತರಾಗುವರು.

ಇಸ್ಲಾಮಿನಲ್ಲಿ ಪುನರ್ಜನ್ಮವನ್ನಲ್ಲ ಪುನರ್ಜೀವನ(ಹಶ್ರ್, Resurrection)ವನ್ನು ಪ್ರತಿಪಾದಿಸುತ್ತದೆ. ಮನುಷ್ಯ ಪುನಃ ಪುನಃ ಜನ್ಮ ತಾಳಿಬರುವ ಕಲ್ಪನೆಯನ್ನು ಅದು

ಒಪ್ಪುವುದಿಲ್ಲ, ಮನುಷ್ಯನ ಆತ್ಮವು ಜೀವ ಜಂತು, ಮರ-ಗಿಡಗಳಾಗಿ ಮತ್ತೆ ಮತ್ತೆ ಜನ್ಮ ತಾಳುವ ಕಲ್ಪನೆಯನ್ನು ಅದು ನಿರಾಕರಿಸುತ್ತದೆ. ಇಸ್ಲಾಮಿನ ಪ್ರಕಾರ, ಮನುಷ್ಯನ ಆರಂಭದಿಂದ ಅಂತಿಮ ದಿನದವರೆಗೆ ಬಂದ ಪ್ರತಿಯೊಬ್ಬ ಮನುಷ್ಯನನ್ನು ಪುನಃ ಜೀವಂತಗೊಳಿಸಲಾಗುವುದು. ಆಗ ಅಲ್ಲಾಹನು ಅವರ ಕರ್ಮಗಳ ಲೆಕ್ಕ ಪತ್ರದ ಆಧಾರದಲ್ಲಿ ಪುರಸ್ಕಾರ ಮತ್ತು ಶಿಕ್ಷೆಯನ್ನು ನೀಡುವನು.

''ಮತ್ತು ತೀರ್ಮಾನದ ಗಳಿಗೆಯು ಖಂಡಿತವಾಗಿಯೂ ಬರಲಿದೆ... ''

(ಪವಿತ್ರ ಕುರ್‌ಆನ್, 15:85)

''ನಿಶ್ಚಯವಾಗಿಯೂ ನಿಮ್ಮ ಪ್ರಭು ಅವರೆಲ್ಲರನ್ನೂ ಒಟ್ಟುಗೂಡಿಸುವನು...''

(ಪವಿತ್ರ ಕುರ್‌ಆನ್, 15:25)

''ಮತ್ತು ಕರ್ಮಪತ್ರವು ಮುಂದಿರಿಸಲ್ಪಡುವುದು. ಆಗ ಅಪರಾಧಿಗಳು ತಮ್ಮ ಜೀವನ ಗ್ರಂಥದಲ್ಲಿ ಅಡಕವಾಗಿರುವುದರ ಬಗ್ಗೆ ಭಯಭೀತರಾಗಿ, ''ಅಯ್ಯೋ ನಮ್ಮ ದುರ್ಗತಿಯೇ, ಇದೆಂತಹ ಗ್ರಂಥ! ನಮ್ಮ ಯಾವುದೇ ಚಿಕ್ಕ ಹಾಗೂ ದೊಡ್ಡ ಕೃತ್ಯವು ಇದರಲ್ಲಿ ಲಿಖಿತಗೊಳ್ಳದೆ ಬಿಟ್ಟು ಹೋಗಿಲ್ಲವಲ್ಲಾ'' ಎಂದು ಹೇಳುತ್ತಿರುವುದನ್ನು ನೀವು ಕಾಣುವಿರಿ. ಅವರು ಏನೆಲ್ಲ ಮಾಡಿದ್ದರೋ ಅವೆಲ್ಲವನ್ನೂ ತಮ್ಮ ಮುಂದೆ ಕಾಣುವರು ಮತ್ತು ನಿಮ್ಮ ಪ್ರಭು ಯಾರ ಮೇಲೂ ಕಿಂಚಿತ್ತೂ ಅಕ್ರಮವೆಸಗಲಾರನು.'' (ಪವಿತ್ರ ಕುರ್‌ಆನ್, 18:49)

''ನಾವು ಪರ್ವತಗಳಿಗೆ ಚಲನೆ ಕೊಡುವ ಆ ದಿನದ ಬಗ್ಗೆ ಚಿಂತೆ ಇರಬೇಕು. ಅಂದು ನೀವು ಭೂಮಿಯನ್ನು ಸಂಪೂರ್ಣ ನಗ್ನವಾಗಿ ಕಾಣುವಿರಿ ಮತ್ತು ನಾವು ಸಕಲ ಮಾನವರನ್ನು (ಹಿಂದಿನ ಮತ್ತು ಮುಂದಿನ ಕಾಲಗಳ) ಒಬ್ಬನೂ ಬಿಟ್ಟು ಹೋಗದಂತೆ ಸುತ್ತುಗಟ್ಟಿ ಒಟ್ಟುಗೂಡಿಸುವೆವು. ಸರ್ವರೂ ನಿಮ್ಮ ಪ್ರಭುವಿನ ಸನ್ನಿಧಿಯಲ್ಲಿ ಸಾಲುಸಾಲಾಗಿ ತರಲ್ಪಡುವರು. ಇದೋ ನಾವು ನಿಮ್ಮನ್ನು ಪ್ರಥಮ ಬಾರಿ ಸೃಷ್ಟಿಸಿದ್ದಂತೆಯೇ ನೀವೆಲ್ಲಾ ನಮ್ಮ ಬಳಿಗೆ ಬಂದು ಬಿಟ್ಟಿರಲ್ಲಾ! ನಾವು ನಿಮಗಾಗಿ ಯಾವುದೇ ವಾಗ್ದಾನದ ಸಮಯವನ್ನು ನಿಶ್ಚಯಿಸಿಯೇ ಇಲ್ಲವೆಂದು ನೀವು ತಿಳಿದುಕೊಂಡಿದ್ದಿರಿ. (ಪವಿತ್ರ ಕುರ್‌ಆನ್, 18:47-48)

ಹ. ಮುಹಮ್ಮದ್‌ರು(ಸ) ಕಿಯಾಮತ್(ಅಂತ್ಯದಿನ)ನ ಲಕ್ಷಣಗಳನ್ನು ಈ ರೀತಿ ವಿವರಿಸಿರುವರು. ಜ್ಞಾನವು ಎತ್ತಲ್ಪಡುವುದು, ಅಜ್ಞಾನವು ಹೆಚ್ಚಾಗುವುದು, ವ್ಯಭಿಚಾರವು ವ್ಯಾಪಕವಾಗುವುದು, ಮದ್ಯಪಾನವು ಅಧಿಕವಾಗುವುದು, ಪುರುಷರು ಕಡಿಮೆ ಸಂಖ್ಯೆಯಲ್ಲೂ ಸ್ತ್ರೀಯರು ಅಧಿಕ ಸಂಖ್ಯೆಯಲ್ಲೂ ಕಾಣಸಿಗುವರು. 50 ಸ್ತ್ರೀಯರಿಗೆ ಒಬ್ಬ ಪುರುಷ ಮಾತ್ರ ಇರುವನು. (ಬುಖಾರಿ, ಮುಸ್ಲಿಮ್, ಅಹ್ಮದ್, ತಿರ್ಮಿದಿ)

''ಅನಂತರ ಒಂದು ಕಹಳೆಯನ್ನೂದಲಾಗುವುದು. ಆಗ ಇವರು ಒಮ್ಮೆಲೆ ತಮ್ಮ ಪ್ರಭುವಿನ ಮುಂದೆ ಹಾಜರಾಗಲಿಕ್ಕಾಗಿ ತಮ್ಮ ಸಮಾಧಿಗಳಿಂದ ಹೊರಟುಬರುವರು.''

(ಪವಿತ್ರ ಕುರ್‌ಆನ್, 36:51)

''ಆಕಾಶವು ಒಡೆದು ಸೀಳಾಗುವಾಗ, ನಕ್ಷತ್ರಗಳು ಚದುರಿ ಹೋಗುವಾಗ''

(ಪವಿತ್ರ ಕುರ್‌ಆನ್, 36:51)

''ಸೂರ್ಯನು ಸುತ್ತಲ್ಪಡುವಾಗ'' (ಪವಿತ್ರ ಕುರ್‌ಆನ್, 81:1)

''ಮತ್ತು ಪರ್ವತಗಳು ಬಣ್ಣ ಬಣ್ಣದ ಹಿಂಜಿದ ಉಣ್ಣೆಯಂತಾಗಿ ಬಿಡುವುದು.''

(ಪವಿತ್ರ ಕುರ್‌ಆನ್, 101:5)

''ಖಂಡಿತ ಅಲ್ಲ! ಭೂಮಿಯು ನಿರಂತರ ಗುದ್ದಿ ಪುಡಿಗುಟ್ಟಲ್ಪಟ್ಟಾಗ''

(ಪವಿತ್ರ ಕುರ್‌ಆನ್, 89:21)

''ಅದು ತನ್ನೊಳಗೆ ಇರುವ ಸಕಲವನ್ನೂ ಹೊರಗೆಸೆದು ಬರಿದಾಗಿ ಬಿಡುವಾಗ''

(ಪವಿತ್ರ ಕುರ್‌ಆನ್, 84:4)

''ಸಮಾಧಿಗಳೊಳಗೆ (ದಫನವಾಗಿ) ಇರುವ ಸಕಲವನ್ನೂ ಹೊರ ತೆಗೆಯಲಾಗುವ ಮತ್ತು ಹೃದಯಗಳೊಳಗೆ (ಅಡಗಿ) ಇರುವ ಎಲ್ಲವನ್ನೂ ಹೊರತೆಗೆದು ವಿಚಾರಣೆಗೊಳ ಪಡಿಸಲಾಗುವ ಆ ಸಂದರ್ಭವನ್ನು ಅವನು ಅರಿತಿಲ್ಲವೇ?''

(ಪವಿತ್ರ ಕುರ್‌ಆನ್, 100:9-10)

''ಅಂದು ಜನರು ಚದುರಿದ ಹಾತೆಗಳಂತಾಗುವರು''

(ಪವಿತ್ರ ಕುರ್‌ಆನ್, 101:4)

ಪುನರ್ಜೀವನದ ದಿನ ಪ್ರತಿಯೊಬ್ಬ ವ್ಯಕ್ತಿ ತನ್ನ ಕರ್ಮಗಳ ಸಂಪೂರ್ಣ ಪ್ರತಿಫಲ ಪಡೆಯುವನು. ಕುರ್‌ಆನ್‌ನಲ್ಲಿ ಈ ರೀತಿ ಇದೆ-

''ತರುವಾಯ ಕಹಳೆ ಊದಲ್ಪಟ್ಟಾಗ ಅಂದು ಅವರ ನಡುವೆ ಯಾವುದೇ ಸಂಬಂಧ ಉಳಿಯಲಾರದು ಮತ್ತು ಅವರು ಪರಸ್ಪರರನ್ನು ವಿಚಾರಿಸಿಯೂ ನೋಡಲಾರರು. ಆಗ ಯಾರ ತಕ್ಕಡಿಯ ತಟ್ಟೆಯು ಭಾರವಾಗಿರುವುದೋ ಅವರೇ ವಿಜಯಿಗಳಾಗುವರು. ಯಾರ ತಟ್ಟೆ ಹಗುರವಿರುವುದೋ ಅವರೇ ತಮ್ಮನ್ನು ತಾವೇ ನಷ್ಟಕ್ಕೊಳಪಡಿಸಿಕೊಂಡವರಾಗಿರುವರು. ಅವರು ಸದಾಕಾಲ ನರಕದಲ್ಲಿರುವರು. ಅಗ್ನಿಯು ಅವರ ಮುಖದ ಚರ್ಮವನ್ನು ನೆಕ್ಕಿ ಬಿಡುವುದು ಮತ್ತು ಅವರ ದವಡೆಗಳು ಹೊರಕ್ಕೆ ಬಂದು ಬಿಡುವುವು.''

(ಪವಿತ್ರ ಕುರ್‌ಆನ್, 23:101-104)

ದೇವನ ಅಂತ್ಯ ಪ್ರವಾದಿ ಮುಹಮ್ಮದ್(ಸ) ಹೇಳಿರುತ್ತಾರೆ.

ಮರಣ ಹೊಂದಿದ ವ್ಯಕ್ತಿಯೊಂದಿಗೆ ಮೂರು ವಸ್ತುಗಳು ಹೋಗುತ್ತವೆ. ಅವನ ಮನೆ ಮಂದಿ, ಅವನ ಸಂಪತ್ತು ಮತ್ತು ಅವನ ಕರ್ಮಗಳು. ಆ ಪೈಕಿ ಎರಡು ವಸ್ತುಗಳು ಹಿಂದಿರುಗಿ ಬರುತ್ತವೆ. ಒಂದು ಮಾತ್ರ ಅವನ ಜೊತೆಯಲ್ಲಿ ಉಳಿಯುತ್ತದೆ. ಅವನ ಮನೆಯವರು ಮತ್ತು ಸಂಪತ್ತು ಹಿಂದಿರುಗುತ್ತವೆ. ಅವನ ಕರ್ಮಗಳು ಅವನೊಂದಿಗೇ ಇರುತ್ತವೆ (ಬುಖಾರಿ, ಮುಸ್ಲಿಮ್)

''ಕಟ್ಟಕಡೆಗೆ ಪ್ರತಿಯೊಬ್ಬನಿಗೂ ಮರಣ ಹೊಂದಬೇಕಾಗಿದೆ ಮತ್ತು ನೀವೆಲ್ಲರೂ ನಿಮ್ಮ ನಿಮ್ಮ ಪ್ರತಿಫಲವನ್ನು ಪುನರುತ್ಥಾನ ದಿನದಂದು ಪಡೆಯುವವರಿದ್ದೀರಿ. ಅಲ್ಲಿ ನರಕಾಗ್ನಿಯಿಂದ ರಕ್ಷೆ ಹೊಂದುವವನೂ ಸ್ವರ್ಗದಲ್ಲಿ ಪ್ರವೇಶ ಪಡೆಯುವವನೂ ನಿಜವಾದ ಕೃತಾರ್ಥನು. ಈ ಲೋಕದ ಜೀವನವಂತೂ ಕೇವಲ ಭ್ರಾಮಕ ಸಂಪತ್ತಾಗಿದೆ.''

(ಪವಿತ್ರ ಕುರ್‌ಆನ್, 3:185)

''ಅಂದು ಪ್ರತಿಯೊಬ್ಬನಿಗೂ ಅವನ ದುಡಿಮೆಯ ಸಂಪೂರ್ಣ ಪ್ರತಿಫಲ ಕೊಡಲಾಗುವುದು ಮತ್ತು ಯಾರ ಮೇಲೂ ಅನ್ಯಾಯವಾಗದು.''

(ಪವಿತ್ರ ಕುರ್‌ಆನ್, 3:25)

''ಪುಣ್ಯ ಮಾಡಿರಲಿ ಅಥವಾ ಪಾಪವೆಸಗಿರಲಿ ಪ್ರತಿಯೊಬ್ಬನೂ ತನ್ನ ಕರ್ಮಫಲವನ್ನು ಪ್ರತ್ಯಕ್ಷ ಪಡೆಯುವ ಆ ದಿನ ಬರಲಿದೆ. ಅಂದು ಮಾನವನು, ಅಕಟ! ಈ ದಿನವು ತನ್ನಿಂದ ಇನ್ನೂ ಬಹಳ ದೂರವಿರುತ್ತಿದ್ದರೆ! ಎಂದು ಆಶಿಸುವನು. ಅಲ್ಲಾಹನು ಸ್ವತಃ ತನ್ನ ಬಗ್ಗೆ (ಭಯಪಡಬೇಕೆಂದು) ನಿಮಗೆ ಎಚ್ಚರಿಕೆ ನೀಡುತ್ತಿದ್ದಾನೆ ಮತ್ತು ಅವನು ತನ್ನ ದಾಸರ ಪರಮ ಹಿತಚಿಂತಕನಾಗಿರುತ್ತಾನೆ.'' (ಪವಿತ್ರ ಖುರ್‌ಆನ್, 3:30)

''ಅಂದು ಸೊತ್ತಾಗಲಿ, ಸಂತತಿಗಳಾಗಲಿ ಸ್ವಲ್ಪವೂ ಫಲಕಾರಿಯಾಗಲಾರವು.''

(ಪವಿತ್ರ ಕುರ್‌ಆನ್, 26:88)

''ಇಂದು ನಾವು ಇವರ ಬಾಯಿಗಳಿಗೆ ಮುದ್ರೆಯನ್ನೊತ್ತಿ ಬಿಡುವೆವು. ಇವರು ಭೂಲೋಕದಲ್ಲಿ ಏನು ಸಂಪಾದಿಸುತ್ತಿದ್ದರೆಂದು ಇವರ ಕೈಗಳು ನಮ್ಮೊಡನೆ ಮಾತಾಡುವುವು ಮತ್ತು ಇವರ ಕಾಲುಗಳು ಸಾಕ್ಷ್ಯ ಹೇಳುವುವು.''

(ಪವಿತ್ರ ಕುರ್‌ಆನ್, 36:65; 41:20-24)

ಅಲ್ಲಾಹನು ಹೇಳುತ್ತಾನೆ.

''ಪುನರುತ್ಥಾನ ದಿನ ನಾವು ನಿಖರವಾಗಿ ತೂಗುವ ತಕ್ಕಡಿಯನ್ನಿಟ್ಟು ಬಿಡುವೆವು. ಅನಂತರ ಯಾರ ಮೇಲೂ ಸ್ವಲ್ಪವೂ ಅಕ್ರಮವಾಗದು. ಯಾರಾದರೂ ಸಾಸಿವೆ

ಕಾಳಿನಷ್ಟಾದರೂ ಏನಾದರೂ ಮಾಡಿದ್ದರೆ ನಾವು ಅದನ್ನು ಮುಂದೆ ತರುವೆವು ಮತ್ತು ಲೆಕ್ಕ ಪರಿಶೋಧನೆಗೆ ನಾವೇ ಸಾಕು.'' (ಪವಿತ್ರ ಕುರ್‌ಆನ್, 21:47)

ಆ ದಿನವು ಸತ್ಕರ್ಮವೆಸಗಿದವರ ಪಾಲಿಗೆ ಸುದಿನವೂ ದುಷ್ಕರ್ಮಿಗಳಿಗೆ ಕಠಿಣ ದಿನವೂ ಆಗಿರುವುದು. ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಇದೆ.

''ಒಳಿತಿನೊಂದಿಗೆ ಬಂದವನಿಗೆ ಅದಕ್ಕಿಂತ ಉತ್ತಮ ಪ್ರತಿಫಲ ಸಿಗುವುದು, ಇಂತಹವರು ಆ ದಿನದ ದಿಗಿಲಿನಿಂದ ಸುರಕ್ಷಿತರಾಗಿರುವರು. ಕೆಡುಕುಗಳೊಂದಿಗೆ ಬರುವವರೆಲ್ಲರೂ ಅಧೋಮುಖವಾಗಿ ನರಕಕ್ಕೆ ಎಸೆಯಲ್ಪಡುವರು. ಮಾಡಿದ್ದನ್ನುಣ್ಣುವ ಹೊರತು ನೀವು ಇನ್ನಾವುದಾದರೂ ಪ್ರತಿಫಲ ಪಡೆಯಬಲ್ಲಿರಾ?''

(ಪವಿತ್ರ ಕುರ್‌ಆನ್, 27:89-90)

''ಅವನ ಬಾಯಿಯಿಂದ ಹೊರಡುವ ಯಾವ ಮಾತು ಕೂಡಾ, ಸದಾ ಸನ್ನದ್ಧನಿರುವ ಒಬ್ಬ ಕಾವಲುಗಾರನಿಂದ ದಾಖಲಿಸಲ್ಪಡದೆ ಇರುವುದಿಲ್ಲ.'' (ಪವಿತ್ರ ಕುರ್‌ಆನ್, 50:18)

''ಅವನು ಎಲ್ಲ ಪ್ರತ್ಯಕ್ಷಾಪ್ರತ್ಯಕ್ಷಗಳ ಜ್ಞಾನಿ. ಅವನು ಅತಿ ಮಹಾನನು ಮತ್ತು ಚಿರೋನ್ನತನು. ನಿಮ್ಮಲ್ಲಾರಾದರೂ ಸ್ವರವೆತ್ತಿ ಮಾತಾಡಲಿ ಅಥವಾ ಮೆಲುದನಿಯಿಂದ ಮಾತಾಡಲಿ, ನಿಶಾಂಧಕಾರದಲ್ಲಿ ಅಡಗಿರಲಿ ಅಥವಾ ಹಗಲಿನ ಬೆಳಕಿನಲ್ಲಿ ಚಲಿಸುತ್ತಿರಲಿ ಅವನ ಮಟ್ಟಿಗೆ ಎಲ್ಲವೂ ಸರಿಸಮಾನ.'' (ಪವಿತ್ರ ಕುರ್‌ಆನ್, 13:9-10)

''ಅನಂತರ ಯಾರ ಕರ್ಮಪತ್ರವು ಅವನ ಬಲಗೈಯಲ್ಲಿ ಕೊಡಲ್ಪಡುವುದೋ ಅವನಿಂದ ಲಘುವಾಗಿ ಲೆಕ್ಕಾಚಾರ ಪಡೆಯಲಾಗುವುದು ಮತ್ತು ಅವನು ತನ್ನವರ ಕಡೆಗೆ ಪರಮಾನಂದದೊಂದಿಗೆ ಮರಳುವನು. ಇನ್ನು ಯಾರ ಕರ್ಮಪತ್ರವನ್ನು ಅವನ ಬೆನ್ನ ಹಿಂದಿನಿಂದ ಕೊಡಲಾಗುವುದೋ ಅವನು ಮೃತ್ಯುವನ್ನು ಕೂಗಿ ಕರೆಯುವನು ಮತ್ತು ಧಗಧಗಿಸುವ ನರಕಾಗ್ನಿಯಲ್ಲಿ ಬೀಳುವನು.'' (ಪವಿತ್ರ ಕುರ್‌ಆನ್, 84:7-12)

''ಹೇಳಿರಿ ವಾಸ್ತವದಲ್ಲಿ ಪುನರುತ್ಥಾನ ದಿನ ತನ್ನನ್ನೂ ತನ್ನವರನ್ನೂ ನಷ್ಟಕ್ಕೊಳಪಡಿಸಿಕೊಂಡವರೇ ನಿಜವಾದ ದಿವಾಳಿಕೋರರು. ಚೆನ್ನಾಗಿ ತಿಳಿದಿರಿ, ಇದೇ ಸುಸ್ಪಷ್ಟ ದಿವಾಳಿಕೋರತನವಾಗಿದೆ.'' (ಪವಿತ್ರ ಕುರ್‌ಆನ್, 39:15)

## ಸ್ವರ್ಗ

ಯಾರು ತಮ್ಮ ಜೀವನ ಪೂರ್ತಿ ಅಲ್ಲಾಹನ ದಾಸ್ಯಾರಾಧನೆಯನ್ನು ಮಾಡಿದ್ದು ಉತ್ತಮ ಕರ್ಮಗಳನ್ನು ಎಸಗಿದ್ದರೋ ಅಂತಹ ವ್ಯಕ್ತಿಗಳು ಸ್ವರ್ಗಕ್ಕೆ ಅರ್ಹರಾಗುವರು. ಅಲ್ಲಾಹನು ಈ ರೀತಿ ವಾಗ್ದಾನ ಮಾಡಿರುತ್ತಾನೆ.

''ಸತ್ಯವಿಶ್ವಾಸವನ್ನಿರಿಸಿಕೊಂಡು ಸತ್ಕರ್ಮಗಳನ್ನು ಕೈಗೊಂಡವರಿಗೆ ನಾವು ತಳಭಾಗದಲ್ಲಿ ನದಿಗಳು ಹರಿಯುವಂತಹ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಕೊಡುವೆವು. ಅವರು ಅಲ್ಲಿ ಸದಾಕಾಲ ವಾಸಿಸುವರು. ಇದು ಅಲ್ಲಾಹನ ದಿಟವಾದ ವಾಗ್ದಾನ. ಅಲ್ಲಾಹನಿಗಿಂತ ಅಧಿಕ ಸತ್ಯವಂತನು ಇನ್ನಾರಿದ್ದಾನೆ?'' (ಪವಿತ್ರ ಕುರ್‌ಆನ್, 4:122)

''ಆದರೆ, ವಿಶ್ವಾಸವಿರಿಸಿಕೊಂಡ ಮತ್ತು ಸತ್ಕರ್ಮವೆಸಗುತ್ತಿದ್ದವರ ಹೊರತು ಅವರಿಗೆ ಎಂದೂ ಮುಗಿಯದಂತಹ ಸತ್ಫಲವಿದೆ.'' (ಪವಿತ್ರ ಕುರ್‌ಆನ್, 95:6)

''ಮುಂದೆ ಅವರ ಕರ್ಮಗಳಿಗೆ ಪ್ರತಿಫಲವಾಗಿ ಅವರ ಕಣ್ಮನಗಳನ್ನು ತಣಿಸುವಂತಹ ಯಾವ ಸತ್ಫಲಗಳನ್ನು ಅವರಿಗಾಗಿ ಬಚ್ಚಿಡಲಾಗಿದೆಯೋ ಅದರ ಅರಿವು ಯಾವ ಜೀವಿಗೂ ಇಲ್ಲ.'' (ಪವಿತ್ರ ಕುರ್‌ಆನ್, 32:17)

ದೇವ ಸಂದೇಶವಾಹಕರಾದ ಪ್ರವಾದಿ ಮುಹಮ್ಮದ್(ಸ) ಹೇಳುತ್ತಾರೆ.

ಕಿಯಾಮತ್ ದಿನದಂದು 5 ಪ್ರಶ್ನೆಗಳಿಗೆ ಉತ್ತರಿಸದೆ ಯಾವ ದಾಸನೂ ಒಂದು ಹೆಜ್ಜೆ ಮುಂದಿಡಲು ಸಾಧ್ಯವಿಲ್ಲ. ನಿನ್ನ ಆಯುಷ್ಯವನ್ನು ಯಾವ ರೀತಿ ವ್ಯಯಿಸಿದೆ? ನಿನ್ನ ಯೌವನವನ್ನು ಹೇಗೆ ಕಳೆದೆ? ನೀನು ಸಂಪತ್ತನ್ನು ಹೇಗೆ ಸಂಗ್ರಹಿಸಿದೆ? ಸಂಪತ್ತನ್ನು ಹೇಗೆ ಖರ್ಚು ಮಾಡಿದೆ? ಗಳಿಸಿದ ಜ್ಞಾನವನ್ನು ಎಷ್ಟರ ಮಟ್ಟಿಗೆ ಜೀವನದಲ್ಲಿ ಅಳವಡಿಸಿದೆ? (ತಿರ್ಮಿದಿ)

ಮತ್ತೊಂದು ಹದೀಸ್‌ನಲ್ಲಿ ಈ ರೀತಿ ಇದೆ.

ಹ. ಜಾಬಿರ್‌ರವರು(ರ) ವರದಿ ಮಾಡಿರುತ್ತಾರೆ. ಪ್ರವಾದಿ ಮುಹಮ್ಮದರು(ಸ) ಹೇಳಿದರು. ಒಳ್ಳೆ ವ್ಯಕ್ತಿಯು ಸ್ವರ್ಗದಲ್ಲಿ ಅನುಗ್ರಹಗಳೊಂದಿಗಿರುವನು. ಒಂದೆಡೆ ಪ್ರಕಾಶ ಗೋಚರಿಸುವುದು, ಅಲ್ಲಿ ನೋಡಿದಾಗ ಅವನ ಪ್ರಭು ಪ್ರತ್ಯಕ್ಷನಾಗಿ ಹೀಗೆ ಹೇಳುವನು: ಓ ಸ್ವರ್ಗವಾಸಿಗಳೇ ನಿಮ್ಮ ಮೇಲೆ ಶಾಂತಿ ಇರಲಿ. ವ್ಯಕ್ತಿ ಅಲ್ಲಾಹನೆಡೆಗೆ ಮತ್ತು ಅಲ್ಲಾಹನು ವ್ಯಕ್ತಿಯೆಡೆಗೆ ನೋಡುವನು. ಅಲ್ಲಾಹನೆಡೆಗೆ ನೋಡುತ್ತಿರುವಷ್ಟೂ ಸಮಯ ಅವನಿಗೆ ಸ್ವರ್ಗದ ವೈಭವಗಳು ನಗಣ್ಯವೆನಿಸುವುದು. ಅಲ್ಲಾಹನು ಅಪ್ರತ್ಯಕ್ಷನಾದರೂ ಅವನ ಪ್ರಕಾಶವು ಉಳಿದು ಬಿಡುವುದು. (ಇಬ್ನುಮಾಜಃ)

ಪವಿತ್ರ ಕುರ್‌ಆನಿನಲ್ಲಿ ಸ್ವರ್ಗದ ಚಿತ್ರಣ ಈ ರೀತಿ ಇದೆ.

''ಅವನಿಗೆ ಸುಖಸಂತೋಷ, ಅತ್ಯುತ್ತಮ ಜೀವನಾಧಾರ ಮತ್ತು ಅನುಗ್ರಹ ತುಂಬಿದ ಸ್ವರ್ಗೋದ್ಯಾನವಿದೆ.'' (ಪವಿತ್ರ ಕುರ್‌ಆನ್, 56:89)

''ಆದರೆ ಸತ್ಯವಿಶ್ವಾಸವಿಟ್ಟವರ ಹಾಗೂ ಸತ್ಕರ್ಮವೆಸಗಿದವರ ಆತಿಥ್ಯಕ್ಕಾಗಿ 'ಫಿರ್‌ದೌಸ್'ನ ಉದ್ಯಾನಗಳಿರುವುವು.'' (ಪವಿತ್ರ ಕುರ್‌ಆನ್, 18:107)

''ಆದರೆ ತಮ್ಮ ಪ್ರಭುವನ್ನು ಭಯಪಡುತ್ತಿದ್ದವರಿಗಾಗಿ ಅಂತಸ್ತಿನ ಮೇಲೆ ಅಂತಸ್ತಿರುವ ಉನ್ನತ ಭವನಗಳಿರುವವು. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವವು....''

(ಪವಿತ್ರ ಕುರ್‌ಆನ್, 39:20; 29:58)

''ಅದರಲ್ಲಿ ಅವರ ಪ್ರತಿಯೊಂದು ಇಚ್ಛೆಯೂ ಪೂರ್ತಿಗೊಳ್ಳುವುದು. ಅವರು ಅದರಲ್ಲಿ ಸದಾಕಾಲ ವಾಸಿಸುವರು....'' (ಪವಿತ್ರ ಕುರ್‌ಆನ್, 25:16)

''ದೇವಭಯವುಳ್ಳವರು ಶಾಂತಿಧಾಮದಲ್ಲಿರುವರು, ಸ್ವರ್ಗೋದ್ಯಾನಗಳಲ್ಲೂ ಚಿಲುಮೆಗಳಲ್ಲೂ- 'ರೇಶ್ಮೆ ಜರತಾರಿ' ಬಟ್ಟೆಗಳನ್ನು ಉಟ್ಟುಕೊಂಡು ಎದುರುಬದುರಾಗಿ ಕುಳಿತಿರುವರು.'' (ಪವಿತ್ರ ಕುರ್‌ಆನ್, 44:51-53)

''ಇಂದು ಸ್ವರ್ಗವಾಸಿಗಳು ಸುಖಿಸುವುದರಲ್ಲೇ ತಲ್ಲೀನರಾಗಿದ್ದಾರೆ. ಅವರೂ ಅವರ ಪತ್ನಿಯರೂ ದಟ್ಟ ನೆರಳುಗಳಲ್ಲಿ ಪೀಠಗಳ ಮೇಲೆ ಒರಗಿಕೊಂಡಿರುವರು.''

(ಪವಿತ್ರ ಕುರ್‌ಆನ್, 36:55,56)

''ಅಲ್ಲಿ ಇವರನ್ನು ಬಂಗಾರದ ಕಂಕಣಗಳಿಂದಲೂ ಮುತ್ತುಗಳಿಂದಲೂ ಅಲಂಕರಿಸಲಾಗುವುದು....''

(ಪವಿತ್ರ ಕುರ್‌ಆನ್, 35:33; 76:21)

''ಅವರ ಮುಂದೆ ಬಂಗಾರದ ತಟ್ಟೆಗಳೂ ಲೋಟೆಗಳೂ ಸುತ್ತು ತರಲ್ಪಡುವುವು...''

(ಪವಿತ್ರ ಕುರ್‌ಆನ್, 43:71; 76:15-16)

ಯಾವ ಕಣ್ಣುಗಳೂ ಕಂಡಿರದ, ಯಾವ ಕಿವಿಗಳೂ ಕೇಳಿರದ ಯಾವ ಮನಸ್ಸೂ ಆಲೋಚಿಸಿರದ ವಸ್ತುಗಳನ್ನು ಅಲ್ಲಾಹನು ಸ್ವರ್ಗವಾಸಿಗಳಿಗಾಗಿ ಒಟ್ಟುಗೂಡಿಸಿರುವನು.

(ಪ್ರವಾದಿ ವಚನ)

''ಅಲ್ಲಿ ಬಿಸಿಲಿನ ಧಗೆಯಾಗಲಿ, ಚಳಿಯ ತೀವ್ರತೆಯಾಗಲಿ ಅವರನ್ನು ಬಾಧಿಸಲಾರದು. ಸ್ವರ್ಗೋದ್ಯಾನದ ನೆರಳು ಅವರ ಮೇಲೆ ಬಾಗಿ ಹರಡಿರುವುದು ಮತ್ತು (ಯಥೇಷ್ಟವಾಗಿ ಕೊಯ್ದುಕೊಳ್ಳುವಂತೆ) ಅದರ ಫಲಗಳು ಸದಾ ಅವರಿಗೆ ಎಟಕುತ್ತಿರುವುವು.''

(ಪವಿತ್ರ ಕುರ್‌ಆನ್ 76:13-14)

''ಅವರಿಗಾಗಿ ಉದ್ಯಾನಗಳು ಮತ್ತು ದ್ರಾಕ್ಷೆಗಳಿವೆ.'' (ಪವಿತ್ರ ಕುರ್‌ಆನ್ 78:32)

''ಮತ್ತು ಅವರು ಇಷ್ಟಪಡುವ ಫಲಗಳು (ಅವರಿಗಾಗಿ ಸಿದ್ಧವಾಗಿವೆ).''

(ಪವಿತ್ರ ಕುರ್‌ಆನ್ 77:42)

''ನಾವು ಹರಿಣಾಕ್ಷಿಗಳುಳ್ಳ ಸುಂದರಾಂಗನೆಯರೊಂದಿಗೆ ಅವರ ವಿವಾಹ ಮಾಡಿಸುವೆವು.'' (ಪವಿತ್ರ ಕುರ್‌ಆನ್, 44:54)

''ಆ ಸ್ವರ್ಗವಾಸಿಗಳು ಹಸಿರು ರತ್ನಗಂಬಳಿಗಳ ಹಾಗೂ ನುಣುಪಾದ ಅಮೂಲ್ಯ ಹಾಸುಗಳ ಮೇಲೆ ದಿಂಬಿಗೊರಗಿ ಕುಳಿತಿರುವರು ಮತ್ತು ನುಣುಪಾದ ಹಾಸುಗಳು ಹಾಸಿರುವವು.'' (ಪವಿತ್ರ ಕುರ್‌ಆನ್, 55:76; 88:16)

''ಹೇರಳ ಫಲಗಳನ್ನೂ ಪಾನೀಯಗಳನ್ನೂ ತರಿಸುತ್ತಿರುವರು. ಮದಿರೆಯ ಚಿಲುಮೆಗಳಿಂದ ಪಾನಪಾತ್ರೆ ತುಂಬಿ ಅವರ ಸುತ್ತಲೂ ತರಲಾಗುವುದು. ಹೊಳೆಯುವ ಮದಿರೆಯು ಕುಡಿಯುವವರಿಗೆ ಅತ್ಯಂತ ರುಚಿಕರವಾಗಿರುವುದು. ಅದರಿಂದ ಅವರ ದೇಹಕ್ಕೆ ಹಾನಿಯಾಗದು ಮತ್ತು ಅದರಿಂದ ಅವರ ಬುದ್ಧಿಯೂ ಪ್ರಭಾವಿತವಾಗದು.''
(ಪವಿತ್ರ ಕುರ್‌ಆನ್, 38:51; 37:45-47)

''ಅಂದು ಕೆಲವು ಮುಖಗಳು ಕಾಂತಿಯುತವಾಗಿರುವುದು. ತಮ್ಮ ಸಾಧನೆಗಳ ಬಗ್ಗೆ ಸಂತುಷ್ಟವಾಗಿರುವವು. ನೀವು ಅವರ ಮುಖಗಳಲ್ಲಿ ಸುಸ್ಥಿತಿಯ ಕಾಂತಿಯನ್ನು ಕಾಣುವಿರಿ.''
(ಪವಿತ್ರ ಕುರ್‌ಆನ್, 88:8-9; 83:24)

''ಅಲ್ಲಿ ಅವರು ಯಾವುದೇ ಅಸಂಬದ್ಧ ಮತ್ತು ಸುಳ್ಳು ಮಾತನ್ನು ಕೇಳಲಾರರು.''
(ಪವಿತ್ರ ಕುರ್‌ಆನ್, 78:35; 88:11)

ಅವರು ಸದಾ ಆರೋಗ್ಯ ಪೂರ್ಣರಾಗಿಯೂ ಆನಂದತುಂದಿಲರಾಗಿಯೂ ಇರುವರು. ಒಂದು ಪ್ರವಾದಿವಚನದಲ್ಲಿ ಈ ರೀತಿ ಇದೆ.

''ಸ್ವರ್ಗದಲ್ಲಿ ಜನರು ಆರೋಗ್ಯದಿಂದಿರುವರು. ಅನಾರೋಗ್ಯ ಪೀಡಿತರಾಗಲಾರರು. ಅಲ್ಲಿ ಮರಣ ಬರಲಾರದು. ಅಲ್ಲಿ ಸದಾ ಯೌವನವೇ ಇರುವುದು. ವೃದ್ಧಾಪ್ಯ ಬರಲಾರದು. ಅಲ್ಲಿ ಸದಾ ಆರಾಮವಿರುವುದು. ಸಂಕಷ್ಟವಿರಲಾರದು. ತಮ್ಮ ತಮ್ಮ ಕರ್ಮಗಳಿಗೆ ಅನುಸಾರ ಜನರ ಮುಖಗಳು ಪ್ರಕಾಶಮಯವಾಗಿರುವುದು, ನಕ್ಷತ್ರಗಳಂತೆ. ಕೆಲವರ ಮುಖಗಳು ಹುಣ್ಣಿಮೆಯ ಚಂದ್ರನಂತಿರುವುದು.'' (ಮುಸ್ಲಿಮ್)

ಇಲ್ಲಿ ಸ್ವರ್ಗದ ಬಗ್ಗೆ ಯಾವೆಲ್ಲ ವಿವರಗಳನ್ನು ನೀಡಲಾಗಿದೆಯೋ ಒಬ್ಬ ಬುದ್ಧಿಯುಳ್ಳ ವಿವೇಕಶಾಲಿ ವ್ಯಕ್ತಿಗೆ ಅದರ ಬಗ್ಗೆ ಬಯಕೆ ಮತ್ತು ಆಶೆ ಉಂಟಾಗಲು ಈ ವಿವರಣೆಗಳು ಪರ್ಯಾಪ್ತವಾಗಿದೆ. ನಾವು ನಮ್ಮನ್ನು ಸ್ವರ್ಗಕ್ಕೆ ಅರ್ಹರಾಗಲು ಪ್ರಯತ್ನಿಸಬೇಕಾದ ಅಗತ್ಯವಿದೆ. ಜಗತ್ತಿನಲ್ಲಿ ನಮಗೆ ಸಿಕ್ಕಿದ ಈ ಅವಕಾಶವನ್ನು ದೇವನ ಆಜ್ಞಾಪಾಲಕರಾಗಿ, ಒಳಿತುಗಳನ್ನು ಮಾಡಿ ಇದರ ಸದುಪಯೋಗ ಮಾಡಿಕೊಳ್ಳಲು ಸಾಧ್ಯವಿದೆ. ಇದರಿಂದ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ವಿಜಯಶಾಲಿಗಳಾಗಲು ಸಾಧ್ಯವಿದೆ.

# ನರಕ

ನರಕವನ್ನು 'ಜಹನ್ನಮ್' ಎಂದು ಕರೆಯಲಾಗುತ್ತದೆ. ಇದು ಪಾಪಿಗಳ ಮತ್ತು ದುಷ್ಕರ್ಮಿಗಳ ವಾಸಸ್ಥಾನವಾಗಿದೆ. ಇಲ್ಲಿ ಅವರು ಅತ್ಯಂತ ಕಠಿಣ ಮತ್ತು ಯಾತನಾಮಯ ಶಿಕ್ಷೆಯಿಂದ ಜರ್ಝರಿತರಾಗುವರು. ಪವಿತ್ರ ಕುರ್‌ಆನ್ ಹೇಳುತ್ತದೆ.

''ಓ ಪೈಗಂಬರರೇ, ಇವರೊಡನೆ ಹೇಳಿರಿ; ತಮ್ಮ ಕರ್ಮಗಳಲ್ಲಿ ಅತ್ಯಧಿಕ ವಿಫಲರು ಯಾರೆಂದು ನಿಮಗೆ ತಿಳಿಸಲೇ? ಲೌಕಿಕ ಜೀವನದಲ್ಲಿ ಯಾರ ಸಕಲ ಪರಿಶ್ರಮಗಳು ಸನ್ಮಾರ್ಗದಿಂದ ತಪ್ಪಿಹೋಗಿದ್ದು ತಾವು ಮಾಡುತ್ತಿರುವುದೆಲ್ಲವೂ ಸರಿಯೇ ಎಂದು ತಿಳಿದುಕೊಂಡಿದ್ದರೋ ಅವರು. ಇವರು ತಮ್ಮ ಪ್ರಭುವಿನ ವಚನಗಳನ್ನೂ ಅವನ ಮುಂದೆ ಹಾಜರಾಗಲಿಕ್ಕಿದೆ ಎಂಬುದನ್ನೂ ನಿರಾಕರಿಸಿದವರು. ಆದುದರಿಂದ ಇವರ ಸಕಲ ಕರ್ಮಗಳೂ ವ್ಯರ್ಥವಾಗಿ ಬಿಟ್ಟವು. ಪುನರುತ್ಥಾನದ ದಿನ ನಾವು ಅವರಿಗೆ ಏನೂ ಮಹತ್ವ ನೀಡಲಾರೆವು. ಅವರು ಸತ್ಯವನ್ನು ನಿಷೇಧಿಸಿದುದಕ್ಕಾಗಿಯೂ ನನ್ನ ವಚನಗಳನ್ನು ಮತ್ತು ನನ್ನ ಸಂದೇಶವಾಹಕರನ್ನು ಪರಿಹಾಸ್ಯ ಮಾಡಿದುದಕ್ಕಾಗಿಯೂ ಅವರ ಪ್ರತಿಫಲ ನರಕವಾಗಿರುತ್ತದೆ.'' (ಪವಿತ್ರ ಕುರ್‌ಆನ್, 18:103-106)

''ಸತ್ಯನಿಷೇಧಿಗಳಿಗೆ ನರಕಾಗ್ನಿಯ ಉಡುಪು ಕತ್ತರಿಸಲ್ಪಟ್ಟಿದೆ. ಅವರ ತಲೆಗಳ ಮೇಲೆ ಕುದಿಯುವ ನೀರನ್ನು ಸುರಿಸಲಾಗುವುದು. ಅದರಿಂದ ಅವರ ಚರ್ಮಗಳು ಮಾತ್ರವಲ್ಲ ಹೊಟ್ಟೆಯೊಳಗಿರುವ ಭಾಗಗಳೂ ಕರಗಿ ಹೋಗುವುವು ಮತ್ತು ಅವರನ್ನು ಶಿಕ್ಷಿಸಲಿಕ್ಕಾಗಿ ಕಬ್ಬಿಣದ ಗದೆಗಳಿರುವುವು. ಅವರು ಭಯಭೀತರಾಗಿ ನರಕದಿಂದ ಹೊರಹೋಗಿ ಬಿಡಲು ಪ್ರಯತ್ನಿಸಿದಾಗಲೆಲ್ಲ, ಸುಡುವ ಶಿಕ್ಷೆಯ ರುಚಿಯನ್ನು ಸವಿಯಿರಿ ಎನ್ನುತ್ತ ಪುನಃ ಅದರೊಳಗೇ ದೂಡಲ್ಪಡುವರು.'' (ಪವಿತ್ರ ಕುರ್‌ಆನ್, 22:19-22, 32:20, 44:48)

''ಅದರ (ನರಕದ) ಅಗ್ನಿಯು ಮಂದವಾಗತೊಡಗಿದಾಗ ನಾವು ಅದನ್ನು ಇನ್ನಷ್ಟು ತೀಕ್ಷ್ಣಗೊಳಿಸುವೆವು.'' (ಪವಿತ್ರ ಕುರ್‌ಆನ್, 17:97; 18:29)

''ಅಗ್ನಿಯು ಅವರ ಮುಖದ ಚರ್ಮವನ್ನು ನೆಕ್ಕಿ ಬಿಡುವುದು ಮತ್ತು ಅವರ ದವಡೆಗಳು ಹೊರಕ್ಕೆ ಬಂದು ಬಿಡುವುವು.'' (ಪವಿತ್ರ ಕುರ್‌ಆನ್, 23:104)

''ಅವರಿಗೆ ನರಕದ ಹಾಸಿಗೆ ಮತ್ತು ನರಕದ ಹೊದಿಕೆ ಇರುವುದು....'' (ಪವಿತ್ರ ಕುರ್‌ಆನ್ 7:41)

''ಸದಾ ಕಾಲ ನರಕದಲ್ಲೇ ವಾಸಿಸುವರು. ಅವರಿಗೆ ಕರುಳನ್ನು ಕತ್ತರಿಸಿ ಬಿಡುವಂತಹ ಕುದಿಯುವ ನೀರನ್ನು ಕುಡಿಸಲಾಗುವುದು.'' (ಪವಿತ್ರ ಕುರ್‌ಆನ್, 47:15; 10:4)

''....ಅಲ್ಲಿ ಅವರು ನೀರು ಬೇಕೆಂದು ಕೇಳಿದಾಗ ಎಣ್ಣೆಯ ಮಡ್ಡಿಯಂತಹ ಹಾಗೂ ಬಾಯಿಯನ್ನು ಸುಟ್ಟು ಹಾಕುವಂತಹ ನೀರಿನಿಂದ ಅವರನ್ನು ಸತ್ಕರಿಸಲಾಗುವುದು. ಅತ್ಯಂತ ಕೆಟ್ಟ ಪೇಯ ಮತ್ತು ಅತಿಕೆಟ್ಟ ವಿಶ್ರಾಂತಿ ಗೃಹ.'' (ಪವಿತ್ರ ಕುರ್‌ಆನ್ 18:29)

'ಝುಕ್ಕೂಮ್' ವೃಕ್ಷವು ಪಾಪಿಗಳ ಆಹಾರವಾಗಿರುವುದು, ಎಣ್ಣೆಯ ಮಡ್ಡಿಯಂತೆ. ಅದು ಹೊಟ್ಟೆಯೊಳಗೆ ಕುದಿಯುತ್ತಿರುವುದು, ಬಿಸಿ ನೀರು ಕುದಿಯುತ್ತಿರುವಂತೆ.

(ಪವಿತ್ರ ಕುರ್‌ಆನ್, 44:43-46)

''ವಾಸ್ತವದಲ್ಲಿ ನರಕವು ಒಂದು ಬೋನಾಗಿದೆ. ಅದರೊಳಗೆ ಅವರು ಯಾವುದೇ ತಂಪನ್ನಾಗಲಿ, ಕುಡಿಯಲರ್ಹವಾದ ಯಾವುದೇ ವಸ್ತುವಿನ ರುಚಿಯನ್ನಾಗಲಿ ಸವಿಯಲಾರರು. ಏನಾದರೂ ಸಿಗುವುದಿದ್ದರೆ ಅದು ಕುದಿಯುವ ನೀರು ಮತ್ತು ಹುಣ್ಣುಗಳ ಕೀವು ಮಾತ್ರ.'' (ಪವಿತ್ರ ಕುರ್‌ಆನ್, 78:21,24,25)

''ದುರ್ದೈವಿಗಳಾಗುವವರು ನರಕಕ್ಕೆ ಹೋಗುವರು. (ಅಲ್ಲಿ ಉಷ್ಣ ಹಾಗೂ ತೃಷಾಧಿಕ್ಯದಿಂದ) ಮೇಲುಸಿರೆತ್ತುತ್ತಲೂ ಬುಸುಗುಡುತ್ತಲೂ ಇರುವರು. ಅದು ಇವರನ್ನು ದೂರದಿಂದ ಕಂಡಾಗ ಇವರು ಅದರ ಆಕ್ರೋಶವನ್ನು ಮತ್ತು ಆವೇಶದ ಆರ್ಭಟವನ್ನು ಕೇಳುವರು ಮತ್ತು ಇವರು ಕೈಕಾಲು ಕಟ್ಟಲ್ಪಟ್ಟು ಅದರ ಒಂದು ಇಕ್ಕಟ್ಟಾದ ಜಾಗದಲ್ಲಿ ತುರುಕಿಸಲ್ಪಟ್ಟಾಗ ತಮ್ಮ ಮರಣಕ್ಕಾಗಿ ಪ್ರಾರ್ಥಿಸತೊಡಗುವರು. ಆಗ ಅವರೊಡನೆ ಇಂದು ಒಂದು ಮರಣಕ್ಕಾಗಿ ಅಲ್ಲ, ಅನೇಕ ಮರಣಗಳಿಗಾಗಿ ಪ್ರಾರ್ಥಿಸಿಕೊಳ್ಳಿರಿ ಎನ್ನಲಾಗುವುದು.''

(ಪವಿತ್ರ ಕುರ್‌ಆನ್, 11:106-107; 25:12-14)

''ನಿಮ್ಮ ಪ್ರಭುವಿನೆಡೆಗೆ ಮರಳಿ ಬನ್ನಿರಿ ಮತ್ತು ಅವನ ಶರಣಾಗತ ದಾಸರಾಗಿ ಬಿಡಿರಿ. ನಿಮ್ಮ ಮೇಲೆ ಯಾತನೆ ಎರಗಿ ಬಿಡುವ ಹಾಗೂ ಮತ್ತೆಲ್ಲಿಂದಲೂ ನಿಮಗೆ ಸಹಾಯ ಸಿಗಲಾರದ ಸ್ಥಿತಿ ಬರುವುದಕ್ಕೆ ಮುಂಚೆ; ಮತ್ತು ನಿಮ್ಮ ಕಡೆಗೆ ನಿಮ್ಮ ಪ್ರಭುವಿನ ಕಡೆಯಿಂದ ಕಳುಹಿಸಲಾಗಿರುವ ಗ್ರಂಥದ ಅತ್ಯುತ್ತಮ ತಾತ್ಪರ್ಯವನ್ನು ಅನುಸರಿಸಿರಿ. ನಿಮಗೆ ಅರಿವೇ ಇಲ್ಲದಂತೆ ನಿಮ್ಮ ಮೇಲೆ ಹಠಾತ್ತನೆ ಯಾತನೆಯು ಬಂದೆರಗುವುದಕ್ಕೆ ಮುಂಚೆ.''

(ಪವಿತ್ರ ಕುರ್‌ಆನ್ 39:54,55)

''ಅನಂತರ ಯಾರಾದರೂ ''ನಾನು ಅಲ್ಲಾಹನ ಮುಂದೆ ಮಾಡುತ್ತಲಿದ್ದ ಅಪರಾಧವು ಖೇದನೀಯ. ನಾನಂತು ಪರಿಹಾಸ್ಯ ಮಾಡುವವರ ಸಾಲಿಗೆ ಸೇರಿದ್ದೆನು'' ಎಂದು ಹೇಳುವಂತಾಗದಿರಲಿ.'' (ಪವಿತ್ರ ಕುರ್‌ಆನ್, 39:56)

❀ ❀ ❀

# ಮರಣದ ಬಳಿಕ ಮುಂದೇನು?

✍ ಡಾ| ಸೈಯದ್ ಶಾಹಿದ್ ಅಲಿ.

"ನೀವು ಇಹಲೋಕ ಜೀವನಕ್ಕೆ ಆದ್ಯತೆ ಕೊಡುತ್ತೀರಿ. ವಸ್ತುತಃ ಪರಲೋಕವು ಹೆಚ್ಚು ಉತ್ತಮವೂ ಶಾಶ್ವತವೂ ಆಗಿದೆ." (ಪವಿತ್ರ ಕುರ್‌ಆನ್, 87:16,17)

"ಜನರು ಲೌಕಿಕ ಜೀವನದ ಬಾಹ್ಯ ಮುಖವನ್ನು ಮಾತ್ರ ತಿಳಿಯುತ್ತಾರೆ ಮತ್ತು ಪರಲೋಕದ ಕುರಿತು ಸ್ವಯಂ ಬೋಧ ಶೂನ್ಯರಾಗಿದ್ದಾರೆ. ಇವರೆಂದಾದರೂ ಸ್ವಯಂ ತಮ್ಮ ಕುರಿತಾಗಿ ವಿವೇಚಿಸಲಿಲ್ಲವೇ? ಅಲ್ಲಾಹನು ಆಕಾಶಗಳನ್ನೂ ಭೂಮಿಯನ್ನೂ ಅವುಗಳ ನಡುವೆ ಇರುವುದೆಲ್ಲವನ್ನೂ ಸತ್ಯಪೂರ್ಣವಾಗಿ ಮತ್ತು ಒಂದು ನಿರ್ದಿಷ್ಟ ಕಾಲಾವಧಿಗಾಗಿಯೇ ಸೃಷ್ಟಿಸಿದ್ದಾನೆ. ಆದರೆ ಅನೇಕರು ತಮ್ಮ ಪ್ರಭುವಿನ ಭೇಟಿಯನ್ನು ನಿರಾಕರಿಸುವವರಾಗಿರುತ್ತಾರೆ." (ಪವಿತ್ರ ಕುರ್‌ಆನ್, 30:7,8)

ಈ ಜಗತ್ತಿನಲ್ಲಿ ಸಂಪೂರ್ಣ ನ್ಯಾಯ ಪರಿಪಾಲನೆಯು ಸಾಧ್ಯವಲ್ಲ. ಒಬ್ಬ ವ್ಯಕ್ತಿ ಹತ್ತು ಮಂದಿಯನ್ನು ಹತ್ಯೆ ಮಾಡಿದ್ದರೆ, ಒಂದು ಬಾರಿ ಮರಣದಂಡನೆಯ ಶಿಕ್ಷೆಯನ್ನು ಆ ವ್ಯಕ್ತಿಗೆ ನೀಡಬಹುದು. ಇದು ಸಂಪೂರ್ಣ ನ್ಯಾಯ ಎನ್ನಲು ಸಾಧ್ಯವಿಲ್ಲ. ಯಾವಾಗ ಕೊಲೆಗಡುಕನನ್ನು ಹತ್ತು ಬಾರಿ ಕೊಲ್ಲಲು ಮತ್ತು ಜೀವಂತಗೊಳಿಸಲು ಸಾಧ್ಯವಾಗುತ್ತದೋ ಆಗ ಮಾತ್ರ ಅದು ನ್ಯಾಯ ಸಮ್ಮತವಾಗುತ್ತದೆ. ಅದೇ ರೀತಿ ಮರಣ ಹೊಂದಿದ ವ್ಯಕ್ತಿಯನ್ನು ಜೀವಂತಗೊಳಿಸಿ ಅವನ ಮುಂದೆ ಅವನನ್ನು ಕೊಲೆಮಾಡಿದ ವ್ಯಕ್ತಿಗೆ ಕೊಲ್ಲುವ ಶಿಕ್ಷೆಯನ್ನು ನೀಡಿದಾಗ ಅವನಿಗೆ ತನಗೆ ನ್ಯಾಯ ಸಿಕ್ಕಿತೆಂದು ಸಂತೋಷವಾಗಬಹುದು. ಇದು ಸಾಧ್ಯವೇ? ಈ ರೀತಿಯ ಜಗತ್ತು ಇದೆಯೇ?

★ ಒಬ್ಬ ವ್ಯಕ್ತಿ ಕಳ್ಳತನ ಮಾಡಿ ಸಿಕ್ಕಿಬಿದ್ದ. ಅವನಿಗೆ ಸೆರೆಮನೆ ಶಿಕ್ಷೆ ನೀಡಲಾಯಿತು. ಕೈದಿಗೆ ಅಲ್ಲಿ ಸಂಕಷ್ಟಗಳನ್ನು ಎದುರಿಸಬೇಕಾಯಿತು. ಎಲ್ಲಿಯವರೆಗೆ ಕೈದಿ ಸೆರೆಯಲ್ಲಿರುತ್ತಾನೋ ಅಲ್ಲಿಯವರೆಗೆ ಅವನ ತಾಯಿಯೂ ಬಹಳ ದುಃಖವನ್ನನುಭವಿಸುತ್ತಾಳೆ. ನಿಜವಾಗಿ ಅಪರಾಧಿ ಮಗ ಹಾಗಿರುವಾಗ ತಾಯಿಯಾದವಳಿಗೆ ದುಃಖವನ್ನು ಅನುಭವಿಸುವ ಶಿಕ್ಷೆಯೇಕೆ? ಏಕೆಂದರೆ ತಾಯಿ ಮತ್ತು ಮಗನ ಮಧ್ಯೆ ಭಾವನಾತ್ಮಕ ಸಂಬಂಧವಿರುತ್ತದೆ.

ಈ ಭಾವನಾತ್ಮಕ ಸಂಬಂಧವನ್ನು ತುಂಡರಿಸಿಬಿಟ್ಟರೆ, ಮಗುವಾಗಿದ್ದಾಗ ಅವನನ್ನು ನೋಡಿಕೊಳ್ಳುವ, ಲಾಲಿಸುವ ಪಾಲಿಸುವ ಕೆಲಸವನ್ನು ಹೇಗೆ ತಾನೇ ಮಾಡಲು ಸಾಧ್ಯ? ಚಳಿಗಾಲದ ರಾತ್ರಿಯಲ್ಲಿಯೂ ಮಗು ಮೂರುಗಂಟೆಗೆ ಹಾಸಿಗೆಯಲ್ಲಿ ಮೂತ್ರ ಮಾಡಿದರೆ, ಅತ್ತರೆ ತಾಯಿಯಾದವಳು ಎದ್ದು ಆದರ ಒದ್ದೆ ಬಟ್ಟೆಯನ್ನು ಬದಲಿಸುತ್ತಾಳೆ. ಏಕೆಂದರೆ ಮಗುವಿಗೆ ನ್ಯೂಮೋನಿಯಾ ಆಗಬಹುದು, ಮಗು ಮರಣಹೊಂದಬಹುದೆಂದು ಆಕೆ ಭಯಪಡುತ್ತಾಳೆ. ಸಂಪೂರ್ಣ ನ್ಯಾಯ ಪಾಲನೆಗಾಗಿ ತಾಯಿ-ಮಗು ಇಬ್ಬರೂ ಯೌವನದಲ್ಲೇ ಇದ್ದು, ಅವರ ಮಧ್ಯೆ ಭಾವನಾತ್ಮಕ ಸಂಬಂಧ ಇರಬಾರದು. ಯಾರು ತಪ್ಪು ಮಾಡಿದ್ದಾರೋ ಅವರು ಮಾತ್ರ ಶಿಕ್ಷೆ ಅನುಭವಿಸಬೇಕು. ಇತರರಿಗೆ ಅದು ನೋವುಂಟು ಮಾಡಬಾರದು. ಈ ರೀತಿಯ ಜಗತ್ತು ಇದೆಯೇ?

ಒಬ್ಬ ಒಳ್ಳೆಯ ವ್ಯಕ್ತಿ ಇರುತ್ತಾನೆ. ಅವನ ಒಳ್ಳೆಯ ಕೆಲಸಗಳಿಂದಾಗಿ ಲಕ್ಷಗಟ್ಟಲೆ ಜನರು ಪ್ರಯೋಜನ ಪಡೆಯುತ್ತಾರೆ. ಅದೇ ರೀತಿ ಒಬ್ಬ ಕೆಟ್ಟ ವ್ಯಕ್ತಿ ಇರುತ್ತಾನೆ. ಅವನ ದುಷ್ಕೃತ್ಯಗಳಿಂದಾಗಿ ಲಕ್ಷಾಂತರ ಜನರು ತೊಂದರೆಗೊಳಗಾಗುತ್ತಾರೆ. ಈ ಸೀಮಿತ ಜೀವನದಲ್ಲಿ ಈ ಒಳ್ಳೆಯ ಮತ್ತು ಕೆಟ್ಟ ವ್ಯಕ್ತಿಗೆ ಅವರ ಒಳಿತು ಮತ್ತು ಕೆಡುಕುಗಳಿಗೆ ಸರಿಯಾದ ಪುರಸ್ಕಾರ ಮತ್ತು ಶಿಕ್ಷೆಯನ್ನು ನೀಡಲು ಸಾಧ್ಯವಿದೆಯೇ? ಖಂಡಿತಾ ಸಾಧ್ಯವಿಲ್ಲ, ಹೀಗೇಕೆ?

★ ಜಗತ್ತಿನಲ್ಲಿ ಪ್ರತಿಯೊಂದು ಕ್ರಿಯೆಗೆ(Action) ಪ್ರತಿಕ್ರಿಯೆ (Reaction) ಇರುತ್ತದೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗೆ ಬಲವಾಗಿ ಹೊಡೆದಾಗ ಅವನು ಎಚ್ಚರ ತಪ್ಪಿ ಬೀಳುತ್ತಾನೆ. ಹಸಿದ ವ್ಯಕ್ತಿ ಆಹಾರ ಸೇವಿಸುತ್ತಾನೆ. ಆಗ ಅವನ ಹಸಿವು ನೀಗುತ್ತದೆ. ರೋಗಿಯಾದ ವ್ಯಕ್ತಿ ಔಷಧಿ ಸೇವಿಸುತ್ತಾನೆ. ಅವನ ರೋಗವು ವಾಸಿಯಾಗುತ್ತದೆ. ಈ ಜಗತ್ತಿನಲ್ಲಿ ಕೆಲವು ಕ್ರಿಯೆಗಳ ಪ್ರತಿಕ್ರಿಯೆ ಗೋಚರವಾಗುವುದಿಲ್ಲ, ನೀವು ಓರ್ವ ಅಂಧ ವ್ಯಕ್ತಿಯನ್ನು ಕೈಹಿಡಿದು ರಸ್ತೆ ದಾಟಿಸಿದಿರಿ, ರಸ್ತೆಯ ಮೇಲಿದ್ದ ಬಾಳೆಯ ಸಿಪ್ಪೆಯನ್ನು ಅಲ್ಲಿಂದ ನೀಗಿಸಿದಿರಿ, ನೀವು ಹಸಿದಿದ್ದರೂ ಇತರ ಹಸಿದವರಿಗೆ ಆಹಾರ ನೀಡಿದಿರಿ ಎಂದಾದರೆ ನಿಮ್ಮ ಈ ಕೆಲಸಗಳ ಪ್ರತಿಕ್ರಿಯೆ ಎಲ್ಲಿದೆ?

★ ಈ ಜಗತ್ತಿನಲ್ಲಿ ಮನುಷ್ಯನಿಗೆ ಸಿಕ್ಕಿದ ಅನುಗ್ರಹಗಳಿಗಾಗಿ ಅವನು ಜವಾಬ್ದಾರನಾಗಿರುತ್ತಾನೆ. ಉತ್ತರದಾಯಿಯೂ ಆಗಿರುತ್ತಾನೆ. ಆದುದರಿಂದ ಎಲ್ಲ ಅನುಗ್ರಹಗಳ ಬಗ್ಗೆ ಅವನಿಗೆ ಹೆದರಿಕೆ ಮತ್ತು ದುಃಖವೂ ಇರುತ್ತದೆ. ಎಷ್ಟು ದೊಡ್ಡ ಅನುಗ್ರಹ ಸಿಕ್ಕಿದೆಯೋ ಅದು ಕಿತ್ತುಕೊಳ್ಳಲ್ಪಡಬಹುದು ಎಂಬ ಹೆದರಿಕೆ. ಅದೇ ರೀತಿ ಅದು ಮುಗಿದು ಬಿಡಬಹುದೆಂಬ ದುಃಖ. ಹೀಗೇಕೆ?

★ ಎಲ್ಲ ಸಂಬಂಧ(Relationship)ಗಳಿಗೂ ಪರಸ್ಪರರನ್ನು ಸಂದರ್ಶಿಸುವ ಸ್ಥಳ(Meeting place) ಇರುತ್ತದೆ. ಉದಾಹರಣೆಗೆ, ಡಾಕ್ಟರ್ ಮತ್ತು ರೋಗಿಯ

ಸಂಬಂಧದಲ್ಲಿ ಅವರ ಭೇಟಿಯ ಸ್ಥಳ ಕ್ಲಿನಿಕ್, ವಕೀಲ ಮತ್ತು ವಾದಿಯ ಸಂಬಂಧದಲ್ಲಿ ಅವರ ಭೇಟಿಯ ಸ್ಥಳ ಕೋರ್ಟ್ ಆಗಿದೆ. ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ಸಂಬಂಧದಲ್ಲಿ ಅವರ ಭೇಟಿಯ ಸ್ಥಳ ತರಗತಿಯ ಕೊಠಡಿಯಾಗಿದೆ, ಹೆತ್ತವರು ಮತ್ತು ಮಕ್ಕಳ ಸಂಬಂಧದಲ್ಲಿ ಅವರ ಭೇಟಿಯ ಸ್ಥಳ ಮನೆಯಾಗಿದೆ, ಸೃಷ್ಟಿಕರ್ತ(Creator) ಮತ್ತು ಸೃಷ್ಟಿಯ(Created) ಸಂಬಂಧ. ಮನುಷ್ಯ ಮತ್ತು ಸೃಷ್ಟಿಕರ್ತನ ಭೇಟಿಯ ಸ್ಥಳ ಎಲ್ಲಿದೆ?

* ಮನುಷ್ಯ ಸಂಪೂರ್ಣವಾಗಿ ಸಂತುಷ್ಟನಾಗಬೇಕಿದ್ದರೆ ಅವನ ಎಲ್ಲ ಅವಶ್ಯಕತೆಗಳೂ ಪೂರ್ಣಗೊಳ್ಳಬೇಕು. ಅವನ ಎಲ್ಲ ಆಶೆಗಳೂ ಈಡೇರಬೇಕು. ವರ್ತಮಾನ ಮತ್ತು ಭವಿಷ್ಯದಲ್ಲಿ ಅವನಿಗೆ ರಕ್ಷಣೆ ಸಿಗಬೇಕು. ಎಲ್ಲ ಬಂಧುಗಳೂ ಜೀವಂತರಾಗಿರಬೇಕು. (ನನ್ನ ತಂದೆಯವರು ಜೀವಿಸಿಲ್ಲ ಎಂದಾದರೆ ನನಗೆ ಸಂತೋಷದಿಂದಿರಲು ಸಾಧ್ಯವಿಲ್ಲ, ನನ್ನ ತಂದೆಯ ತಂದೆಯವರು ಜೀವಂತವಿರದಿದ್ದರೆ ನನ್ನ ತಂದೆಯವರಿಗೂ ಖುಷಿ ಇಲ್ಲ) ಎಲ್ಲರೂ ಆರೋಗ್ಯವಂತರಾಗಿರಬೇಕು. ಎಲ್ಲರ ಬಳಿಯೂ ಸಾಕಷ್ಟು ಸಂಪತ್ತು ಇರಬೇಕು. ಯಾರೂ ಅನಾರೋಗ್ಯ ಪೀಡಿತರಾಗಿರಬಾರದು. ಯಾರೂ ವೃದ್ಧಾಪ್ಯಕ್ಕೆ ತಲುಪಬಾರದು. ಯಾರೂ ಅಪಘಾತಗಳಿಗೆ ಈಡಾಗಬಾರದು. ಯಾರೂ ಮರಣ ಹೊಂದಬಾರದು. ಆದರೆ ಈ ಜಗತ್ತಿನಲ್ಲಿ ಹಾಗೆ ಆಗಲು ಸಾಧ್ಯವಿಲ್ಲ, ಮನುಷ್ಯನಿಗೆ ಪ್ರಪಂಚದಲ್ಲಿ ಸಂಪೂರ್ಣ ಸಂತೋಷ ಲಭ್ಯವಾಗುವುದಿಲ್ಲ ಏಕೆ?

* ಆಲೋಚಿಸಿ ನೋಡಿ. ಒಂದು ವೇಳೆ ಈ ಜಗತ್ತಿನಿಂದ ಎಲ್ಲ ಮನುಷ್ಯರನ್ನೂ ನೀಗಿಸಿಬಿಟ್ಟರೆ ಏನಾಗಬಹುದು? ಯಾವುದೇ ವ್ಯತ್ಯಾಸ ಉಂಟಾಗಲಾರದು. ಸೂರ್ಯನು ಯಥಾಪ್ರಕಾರ ಉದಯಿಸುವನು. ಆದರ ಉಷ್ಣತೆಗೆ ಸಮುದ್ರದ ನೀರು ಆವಿಯಾಗಿ ಮೋಡಗಳುಂಟಾಗುವುದು. ಮೋಡಗಳಿಂದ ಮಳೆ ಸುರಿಯುವುದು. ಜಲಚಕ್ರ(Water cycle) ಇದೇ ರೀತಿ ನಡೆಯುತ್ತಲೇ ಇರುವುದು.

ಆಲೋಚಿಸಿ ನೋಡಿ, ಒಂದು ವೇಳೆ ಭೂಮಿಯ ಮೇಲೆ ಮನುಷ್ಯರಿದ್ದಾರೆ. ಆದರೆ ಸೂರ್ಯನಿಲ್ಲ, ಗಾಳಿ ಅಥವಾ ನೀರು ಇವುಗಳ ಪೈಕಿ ಯಾವುದಾದರೂ ಒಂದು ವಸ್ತುವನ್ನು ಇಲ್ಲವಾಗಿಸಿದರೆ ಏನಾಗಬಹುದು? ಜಗತ್ತಿನ ಸಂಪೂರ್ಣ ವ್ಯವಸ್ಥೆ ಕೊನೆಗೊಳ್ಳುವುದು. ಇದರಿಂದ ಮನುಷ್ಯನು ಜಗತ್ತಿನ ವ್ಯವಸ್ಥೆಯಿಂದ ಅತಿಹೆಚ್ಚು ಪ್ರಯೋಜನ ಪಡೆಯುತ್ತಿರುವವನು ಎಂದು ಮನವರಿಕೆಯಾಗುತ್ತದೆ. ಅವನು ಸ್ವತಃ ಪ್ರಯೋಜನ ಉಂಟು ಮಾಡುವವನಲ್ಲ, ಜಗತ್ತಿನ ಉಳಿದೆಲ್ಲ ವಸ್ತುಗಳು ಮನುಷ್ಯನಿಗೆ ಪ್ರಯೋಜನವನ್ನುಂಟು ಮಾಡುತ್ತಿವೆ. ಇದರಿಂದ ಜಗತ್ತಿನ ಈ ವ್ಯವಸ್ಥೆಗಳೆಲ್ಲಾ ಮನುಷ್ಯನಿಗಾಗಿ ಸೃಷ್ಟಿಸಲ್ಪಟ್ಟಿದೆ ಎಂಬುದು ಮನವರಿಕೆಯಾಗುತ್ತದೆ. ಹಾಗಿದ್ದಲ್ಲಿ ಮನುಷ್ಯನನ್ನು ಯಾವ ಉದ್ದೇಶಕಾಗಿ ಸೃಷ್ಟಿಸಲಾಗಿದೆ?

* ಒಬ್ಬ ಜೀವಂತ ಮತ್ತು ಮೃತ ವ್ಯಕ್ತಿಯ ಮಧ್ಯೆ ವ್ಯತ್ಯಾಸವಿರುತ್ತದೆ. ಜೀವಂತ ಮನುಷ್ಯನ ಮನಸ್ಸಿನಲ್ಲಿ ಆಲೋಚನೆಗಳು ಹುಟ್ಟುತ್ತಿರುತ್ತವೆ. ಅವನು ಮಾತಾಡಬಲ್ಲ, ಅದೇ ರೀತಿ ಕೆಲಸವನ್ನೂ ಮಾಡಬಲ್ಲ.

ಮನಃಶಾಸ್ತ್ರದ(Psychology) ಪ್ರಕಾರ ಮನುಷ್ಯನ ಮೆದುಳಿನಲ್ಲಿ ಎರಡು ಭಾಗಗಳಿವೆ. ಒಂದು ಸಜೀವ, ಮತ್ತೊಂದು ಜಡ. ಈ ಜಡ ಭಾಗವು ಬುದ್ಧಿಯ ಗೋದಾಮಿನಂತೆ ಕೆಲಸ ನಿರ್ವಹಿಸುತ್ತದೆ. ಇದರಲ್ಲಿ ಮನುಷ್ಯನ ದೊಡ್ಡ ಸಣ್ಣ ಎಲ್ಲಾ ಆಲೋಚನೆಗಳೂ ಸಂಗ್ರಹವಾಗಿರುತ್ತದೆ. ಯಾವಾಗ ಮನುಷ್ಯನಿಗೆ ಸ್ಮೃತಿ ಬರುತ್ತದೋ ಆಗ ಎಲ್ಲ ವಿಚಾರಗಳು ನೆನಪಿಗೆ ಬರುತ್ತದೆ. ಕೆಲವೊಮ್ಮೆ ಬಾಲ್ಯದ ದಿನಗಳ ಘಟನೆಗಳು ಕನಸಿನ ರೂಪದಲ್ಲಿ ಬರುತ್ತದೆ. ಇದರಿಂದ ಮನುಷ್ಯನ ಎಲ್ಲ ಆಲೋಚನೆಗಳು ಎಲ್ಲೋ ಒಂದೆಡೆ ಜಮೆಯಾಗಿರುತ್ತದೆ ಮತ್ತು ಪುನಃ ನೆನಪಿಗೆ ಬರುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಮನುಷ್ಯನ ಎಲ್ಲಾ ಸಣ್ಣ ದೊಡ್ಡ ಆಲೋಚನೆಗಳು ಮಸ್ತಿಷ್ಕದ ಜಡ ಭಾಗದಲ್ಲಿ ದಾಖಲಾಗುತ್ತಿದೆ. ಯಾಕೆ ಈ ರೀತಿ ಆಗುತ್ತಿದೆ ಎಂಬುದನ್ನು ಆಲೋಚಿಸಿ ನೋಡಿ.

ಭೌತಶಾಸ್ತ್ರದ ಪ್ರಕಾರ, ಮನುಷ್ಯನ ಬಾಯಿಯಿಂದ ಹೊರಡುವ ಧ್ವನಿ ಮತ್ತು ಮಾತುಗಳು ಎಂದಿಗೂ ಕೊನೆಗೊಳ್ಳುವುದಿಲ್ಲ, ಪ್ರತೀ ಸೆಕೆಂಡಿಗೆ ಒಂದು ಲಕ್ಷದ ಎಂಬತ್ತಾರು ಸಾವಿರ ಮೈಲಿ ವೇಗದಲ್ಲಿ ವಾಯುವಿನಲ್ಲಿ ಹರಿದಾಡುತ್ತಿರುತ್ತದೆ. ಮುಗಿದು ಹೋದ ಮಾತುಕತೆಗಳನ್ನು ದಾಖಲಿಸುವಷ್ಟರ ಮಟ್ಟಿಗೆ ವಿಜ್ಞಾನವು ಇಂದು ಮುಂದುವರಿದಿದೆ. ಅದನ್ನು ಪುನಃ ಆಲಿಸಬಹುದು. ಆದರೆ ಇಂದು ವಾಯುವಿನಲ್ಲಿ ನಮ್ಮೆಲ್ಲರ ಮಾತುಕತೆಗಳೂ ಬೆರೆತುಹೋಗಿವೆ. ಅದನ್ನು ಬೇರ್ಪಡಿಸಲು ಸಾಧ್ಯವಿಲ್ಲ, ವಿಜ್ಞಾನಿಗಳು ಇವುಗಳನ್ನು ಬೇರ್ಪಡಿಸಿ ಆಲಿಸಲು ಸಾಧ್ಯವಿದೆಯೇ ಎಂಬುದರ ಬಗ್ಗೆ ಸಂಶೋಧನೆ ನಡೆಸುತ್ತಿದ್ದಾರೆ. ಇದರಿಂದ ಮನುಷ್ಯನ ಬಾಯಿಯಿಂದ ಹೊರಡುವ ಪ್ರತಿಯೊಂದು ಮಾತೂ ರೆಕಾರ್ಡ್ ಆಗುತ್ತಿದೆ ಎಂಬುದು ತಿಳಿಯುತ್ತದೆ. ಹಾಗಿದ್ದರೆ ಈ ರೆಕಾರ್ಡಿಂಗ್ ಯಾಕಾಗಿ ಆಗುತ್ತಿದೆ?

ಮನುಷ್ಯನ ದೇಹದಿಂದ ಶಾಖದ ಅಲೆಗಳು ಹೊರಡುತ್ತವೆ(Heat waves). ಇದು ಮನುಷ್ಯನ ಪ್ರತಿಯೊಂದು ಕ್ರಿಯೆಯ ಚಿತ್ರವನ್ನು ಉಂಟುಮಾಡುತ್ತದೆ. (ನಿಲ್ಲುವ, ಕುಳಿತುಕೊಳ್ಳುವ, ಮಲಗುವ) ನವೆಂಬರ್ 1960ರ 'ರೀಡರ್ಸ್ ಡೈಜೆಸ್ಟ್'ನಲ್ಲಿ, ಅಮೇರಿಕಾ ದೇಶದ ಮೇಲೆ ಒಂದು ವಿಮಾನವು ಹಾರಲ್ಪಟ್ಟಿತು. ಎರಡು ಗಂಟೆಗಳ ಬಳಿಕ ವಿಮಾನ ಹಾದುಹೋದ ಖಾಲಿಯಾದ ದಾರಿಯಿಂದ ಅದರಲ್ಲಿ ಕುಳಿತಿದ್ದ ವ್ಯಕ್ತಿಗಳ ಫೋಟೋವನ್ನು ತೆಗೆಯಲಾಯಿತು. ಮನುಷ್ಯನು ಒಂದು ಸ್ಥಳದಿಂದ ಹೊರಟುಹೋದ ಬಳಿಕವೂ ಅದೇ ಸ್ಥಳದಿಂದ ಆ ವ್ಯಕ್ತಿಯ ಫೋಟೋವನ್ನು ಸೆರೆಹಿಡಿಯುವ ಈ ಸಾಧನವನ್ನು ಇವಾಪರೋಗ್ರಾಫ್(Evaporagraph) ಎಂದು ಕರೆಯಲಾಗುತ್ತದೆ ಎಂದು ಬರೆಯಲಾಗಿತ್ತು.

ಮನುಷ್ಯ ಒಂದು ಸ್ಥಳದಲ್ಲಿ ಇದ್ದು ಅಲ್ಲಿಂದ ಹೊರಟು ಹೋದ ಮೇಲೆ ಅವನ ಚಿತ್ರವು ಆ ಸ್ಥಳದಲ್ಲಿ ಕೆಲವು ಗಂಟೆಗಳವರೆಗೆ ಮಾತ್ರ ಇರುತ್ತದೋ ಅಥವಾ ಶಾಶ್ವತವಾಗಿ ಉಳಿದಿರುತ್ತದೋ ಎಂಬುದು ಈಗ ವಿಜ್ಞಾನಿಗಳ ಮಧ್ಯೆ ಇರುವ ಪ್ರಶ್ನೆ, ಇದು ಶಾಶ್ವತವಾಗಿ ಇರಲೂಬಹುದು. ಮನುಷ್ಯನು ಒಂದು ಸ್ಥಳದಿಂದ ಹೊರಟು ಹೋದ ಬಳಿಕ ಅಲ್ಲಿಂದ ಆ ವ್ಯಕ್ತಿಯ ಫೋಟೋವನ್ನು ಎಷ್ಟು ಸಮಯದ ವರೆಗೆ ತೆಗೆಯಬಹುದೆಂದು ತಿಳಿಯುವಷ್ಟರ ಮಟ್ಟಿಗೆ ವಿಜ್ಞಾನವು ಪ್ರಗತಿ ಹೊಂದಿಲ್ಲ, ಮುಂದೆ ಹಾಗೆ ಆಗಬಹುದು. ಇದರಿಂದ ಮನುಷ್ಯನ ಪ್ರತಿಯೊಂದು ಕ್ರಿಯೆಯು ದಾಖಲಿಸಲ್ಪಡುತ್ತಿದೆ ಎಂಬುದು ತಿಳಿಯಿತು. ಮನುಷ್ಯನ ಚಲನವಲನಗಳ ದಾಖಲೆಯು ಯಾಕಾಗಿ ಆಗುತ್ತಿದೆ?

ಮನುಷ್ಯನ ಮಾತುಕತೆ, ಆಲೋಚನೆ ಮತ್ತು ಕೆಲಸಗಳ ರೆಕಾರ್ಡಿಂಗ್ ಯಾಕಾಗಿ ನಡೆಯುತ್ತಿದೆ? ಯಾವುದಾದರೂ ನ್ಯಾಯ ತೀರ್ಮಾನಕ್ಕಾಗಿಯೇ? ಅಲ್ಲಿ ಅವನ ಈ ದಾಖಲೆಗಳನ್ನು ನೋಡಿ ಯಾವುದಾದರೂ ತೀರ್ಮಾನ ಕೈಗೊಳ್ಳಲಿಕ್ಕಿದೆಯೇ?

ಮನುಷ್ಯನಲ್ಲಿರುವ ಈ ಎಲ್ಲ ಪ್ರಶ್ನೆಗಳಿಗೆ ಉತ್ತರವನ್ನು ಸೃಷ್ಟಿಕರ್ತನು ನೀಡಿದ್ದಾನೆ. ಮನುಷ್ಯನನ್ನು ಎಂದೆಂದಿಗೂ ಕೊನೆಗೊಳ್ಳಲಿಕ್ಕಿಲ್ಲದ ಶಾಶ್ವತ ಜೀವನಕ್ಕಾಗಿ ಸೃಷ್ಟಿಸಲಾಗಿದೆ ಎಂದು ಸೃಷ್ಟಿಕರ್ತನು ಹೇಳುತ್ತಾನೆ. ಮನುಷ್ಯ ಜೀವನದಲ್ಲಿ ಎರಡು ಭಾಗಗಳಿವೆ. ಒಂದು ಮರಣದ ಮೊದಲಿನ ಜೀವನ. ಇದು ಬಹಳ ಸೀಮಿತವಾದ ಸಮಯವನ್ನು ಹೊಂದಿದೆ ಮತ್ತು ಈ ಜೀವನ ಪರೀಕ್ಷೆಯಾಗಿದೆ. ಇನ್ನೊಂದು ಮರಣಾನಂತರದ ಜೀವನ. ಇದು ಶಾಶ್ವತವಾದ ಜೀವನವಾಗಿದೆ. ಈ ಶಾಶ್ವತವಾದ ಜೀವನದಲ್ಲಿ ಮರಣದ ಮೊದಲು ನಡೆಸಿದ ಜೀವನದ ಆಧಾರದಲ್ಲಿ ಪುರಸ್ಕಾರ(ಸ್ವರ್ಗ) ಮತ್ತು ಶಿಕ್ಷೆ(ನರಕ)ಯು ನೀಡಲ್ಪಡುವುದು. ಮರಣಾನಂತರದ ಎಂದೆಂದಿಗೂ ಕೊನೆಗೊಳ್ಳದ ಶಾಶ್ವತ ಜೀವನಕ್ಕೆ ಸೃಷ್ಟಿಕರ್ತನು 'ಆಖಿರತ್' ಅಂದರೆ 'ಪರಲೋಕ' ಎಂಬ ಹೆಸರನ್ನು ನೀಡಿರುವನು. ಪರಲೋಕದ ಮೇಲೆ ವಿಶ್ವಾಸವಿರಿಸುವುದರಿಂದ ಮನುಷ್ಯನ ಎಲ್ಲ ಪ್ರಶ್ನೆಗಳಿಗೂ ಉತ್ತರ ಸಿಗುವುದು.

★ ಈ ಜೀವನದ ಕಥೆಯು ಮರಣದೊಂದಿಗೆ ಮುಕ್ತಾಯಗೊಳ್ಳುವುದಿಲ್ಲ, ನೀವು ಟಿವಿಯಲ್ಲಿ ಒಂದು ಸಿನೆಮಾವನ್ನು ನೋಡುತ್ತಿದ್ದೀರಿ ಎಂದಿಟ್ಟುಕೊಳ್ಳೋಣ. ಒಮ್ಮೆಲೆ ಮಧ್ಯದಲ್ಲಿ ಈ ಸಿನೆಮಾ ಇಲ್ಲಿಗೆ ಮುಗಿಯಿತು ಎಂದು ಹೇಳಿದರೆ ನಿಮಗೆ ಹೇಗನಿಸಬಹುದು. ಅದೇ ರೀತಿ ಒಂದು ಪ್ರಬಂಧವನ್ನು ಮಧ್ಯದಲ್ಲೇ ನಿಲ್ಲಿಸಿಬಿಟ್ಟರೆ ಹೇಗಿರಬಹುದು. ಹೀಗಾದರೆ ಸಿನೆಮಾ ನೋಡುತ್ತಿರುವ ಮತ್ತು ಪ್ರಬಂಧ ಓದುತ್ತಿರುವ ವ್ಯಕ್ತಿ ಇದನ್ನು ಒಪ್ಪಿಕೊಳ್ಳಲು ಸಿದ್ಧನಾಗಲಾರ. ಅವನು ಕೊನೆಯಲ್ಲಿ ಏನಾಯಿತು ಎಂಬುದನ್ನು ತಿಳಿಯಲು ಉತ್ಸುಕನಾಗಿರುವನು. ಸಿನೆಮಾ ನಿರ್ಮಾಪಕರಿಂದ, ಪ್ರಬಂಧದ ಲೇಖಕರಿಂದ ಅದರ ಅಂತ್ಯ ಹೇಗಾಯಿತು ಎಂಬುದನ್ನು ತಿಳಿಸಬೇಕು ಎಂಬ ನಿರೀಕ್ಷೆಯನ್ನು ಸಹಜವಾಗಿಯೇ

ಎಲ್ಲರೂ ಇಟ್ಟುಕೊಂಡಿರುತ್ತಾರೆ. ಇದೇ ರೀತಿಯಲ್ಲಿ ನಮ್ಮ ಈ ಜೀವನದ ಕಥೆಯು ಮರಣದೊಂದಿಗೆ ಕೊನೆಗೊಳ್ಳುತ್ತದೆ. ಆಗ ಜೀವನದ ಕಥೆಯು ಇನ್ನೂ ಸಂಪೂರ್ಣವಾಗಿರುವುದಿಲ್ಲ, ಹಾಗಿದ್ದಲ್ಲಿ ದೇವನು ನಮ್ಮನ್ನು ಅದರ ಪರಿಪೂರ್ಣತೆಗೆ ತಲುಪಿಸುವನು ಎಂಬುದಾಗಿ ಬುದ್ಧಿಯುಳ್ಳ ವ್ಯಕ್ತಿ ನಂಬುತ್ತಾನೆ. ವಾಸ್ತವದಲ್ಲಿ ಪರಲೋಕ ಜೀವನವು ನಮ್ಮ ಈ ಜೀವನದ ಕಥೆಯ ಪರಿಣಾಮವಾಗಿರುತ್ತದೆ.

ಮರಣದ ಬಳಿಕ ಮತ್ತೊಂದು ಜೀವನದ ಪರಿಕಲ್ಪನೆಯು ಎಲ್ಲ ಧರ್ಮಗಳಲ್ಲಿ ಕಾಣಸಿಗುತ್ತದೆ. ಹಿಂದೂ ಧರ್ಮದಲ್ಲಿ ಈ ನಂಬಿಕೆ ಇದೆ. ವೇದಗಳಲ್ಲಿ ಪುನರ್ಜೀವನದ ಬಗ್ಗೆ ಹೇಳಲಾಗಿದೆ. ಇದರಲ್ಲಿ ಮರಣದ ಬಳಿಕ ಬರಲಿರುವ ಒಂದು ಶಾಶ್ವತ ಜೀವನದ ಬಗ್ಗೆ ಹೇಳಲಾಗಿದೆ. ವೇದಗಳಲ್ಲಿ ಪುನಃ ಪುನಃ ಜನ್ಮ ತಾಳುವ ಪುನರ್ಜನ್ಮದ ಕಲ್ಪನೆ ಕಾಣಸಿಗುವುದಿಲ್ಲ, ಪುನರ್ಜನ್ಮ ಮತ್ತು ಪುನಃ ಪುನಃ ಬೇರೆ ಬೇರೆ ಜನ್ಮ ತಾಳಿ ಬರುವ ಕಲ್ಪನೆಯು ಭಿನ್ನವಾಗಿದೆ. ವೇದಗಳಲ್ಲಿ ಪುನರುಜ್ಜೀವನದ ಕಲ್ಪನೆ ಇದೆ. ಇದರ ಅರ್ಥವೇನೆಂದರೆ ಮನುಷ್ಯ ತನ್ನ ಕರ್ಮಗಳ ಫಲವನ್ನು ಅನುಭವಿಸಲು ಪುನಃ ಜನ್ಮ ಪಡೆಯುತ್ತಾನೆ. ಆದರೆ ಪುನಃ ಪುನಃ ಜನ್ಮ ತಾಳುವ ಕಲ್ಪನೆ ಅಂದರೆ ಮೋಕ್ಷ ಪ್ರಾಪ್ತಿಗಾಗಿ ತಮ್ಮ ಕರ್ಮಗಳಿಗನುಸಾರ 84ಲಕ್ಷ ಯೋನಿಗಳಲ್ಲಿ ಪರಿಭ್ರಮಣೆ ಹೊಂದಿ ಬರಬೇಕೆನ್ನುವ ಕಲ್ಪನೆ ಇದಕ್ಕಿಂತ ಭಿನ್ನವಾಗಿದೆ. ಉಪನಿಷತ್ತಿನ ಕಾಲದಲ್ಲಿ ಈ ಮೇಲಿನ ಎರಡೂ ವಿಷಯಗಳು ಒಂದೇ ಎಂದು ಪರಿಗಣಿಸಲಾಯಿತು. ಛಂದೋಗ್ಯ ಉಪನಿಷತ್ತಿನಲ್ಲಿ ಎಲ್ಲಕ್ಕಿಂತ ಮೊದಲು ಪುನರ್ಜನ್ಮದ ಬಗ್ಗೆ ಹೇಳಲಾಗಿದೆ. (ಪರಲೋಕದಲ್ಲಷ್ಟೇ ಅಲ್ಲ, ಈ ಜಗತ್ತಿನಲ್ಲೇ ತಮ್ಮ ಕರ್ಮಗಳಿಗನುಸಾರ ಪ್ರಾಣಿಗಳ ಜನ್ಮ ಪಡೆಯುವರು)

ಪುನರ್ಜನ್ಮದಲ್ಲಿರುವ ಆರಂಭದ ಶಬ್ದ ಪುನಃ ಎಂಬುದರ ಅರ್ಥ 'ಇನ್ನೊಂದು ಸಲ' ಎಂದಾಗಿದೆ. ಪದೇ ಪದೇ ಎಂದಲ್ಲ, ಆದರೆ ಉಪನಿಷತ್ತಿನಲ್ಲಿ ಪುನಃ ಎಂಬ ಪದಕ್ಕೆ ಪದೇ ಪದೇ ಎಂಬ ಅರ್ಥವನ್ನು ಸ್ವೀಕರಿಸಲಾಗಿದೆ ಮತ್ತು ಪುರಾಣ, ರಾಮಾಯಣ, ಮಹಾಭಾರತ, ಧರ್ಮಶಾಸ್ತ್ರ ಇತ್ಯಾದಿಗಳಲ್ಲಿ ಇದನ್ನು ಅತ್ಯಂತ ವಿಸ್ತೃತವಾಗಿ ಪ್ರತಿಪಾದಿಸಲಾಗಿದೆ. ಇದರಲ್ಲಿ ಶ್ರದ್ಧಾ ಸಿದ್ಧಾಂತ ಅಂದರೆ ಮೃತರ ಆತ್ಮಗಳಿಗೆ ಶಾಂತಿ ಮಾಡುವ ಕರ್ಮಕಾಂಡವೂ ಇದೆ. ಇದು ಪುನರ್ಜನ್ಮದ ಕಲ್ಪನೆಗೆ ಸಂಪೂರ್ಣ ವಿರುದ್ಧವಾಗಿದೆ.

ಕುರ್‌ಆನಿನ ಪ್ರಕಾರ ಪ್ರತಿಯೊಬ್ಬ ಮನುಷ್ಯನನ್ನು ಮರಣದ ಬಳಿಕ ಪುನಃ ಜೀವಂತಗೊಳಿಸಲಾಗುವುದು. ಇದು ಕೊನೆಯಿಲ್ಲದ ಶಾಶ್ವತ ಜೀವನವಾಗಿರುವುದು. ಈ ಜಗತ್ತು ಒಳ್ಳೆಯ ಅಥವಾ ಕೆಟ್ಟ ಕೆಲಸಗಳನ್ನು ಮಾಡಲು ಅವಕಾಶವಿರುವ ಸ್ಥಳವಾಗಿರುವುದು. ಮನುಷ್ಯನಿಗೆ ಈ ಜಗತ್ತಿನಲ್ಲಿ ಮಾಡಿದ ಒಳಿತು ಮತ್ತು ಕೆಡುಕುಗಳ ಆಧಾರದಲ್ಲೇ ಶಾಶ್ವತವಾದ ಸುಖವುಳ್ಳ ಅಥವಾ ದುಃಖದಾಯಕ ಜೀವನ ನಾಳೆ ಪರಲೋಕದಲ್ಲಿ ಲಭ್ಯವಾಗುವುದು.

★ ಈ ಭೂಮಿ ಎಂಬ ಗ್ರಹದ ಮೇಲೆ ಜೀವಿಸುವ ಪ್ರತಿಯೊಬ್ಬ ಮನುಷ್ಯನು ಈ ಭೂಮಿಗೆ ಬರುವಾಗಲೇ ಈ ಜಗತ್ತಿನಿಂದ ಮರಳುವ ಟಿಕೆಟ್ ತೆಗೆದುಕೊಂಡೇ ಬಂದಿರುವನು. ಅದು ದೃಢೀಕರಣ ಅಂದರೆ Confirmation ಆಗುವುದನ್ನೇ ನಾವು ಮೃತ್ಯು ಅಥವಾ ಮರಣ ಎಂದು ಕರೆಯುತ್ತೇವೆ.

★ ಮನುಷ್ಯ ರೋಗಿಯಾಗುವುದು, ವೃದ್ಧನಾಗುವುದು, ಮರಣಹೊಂದುವುದನ್ನು ನೋಡುವಾಗ ಈ ಜೀವನ ಬಹಳ ದುಃಖದಾಯಕ. ಈ ಜೀವನ ಸರಿಯಾಗಿಲ್ಲ ಎಂದೆನಿಸುತ್ತದೆ. ಏಕೆಂದರೆ ಇದು ಯಾವುದಾದರೂ ಕೆಲವು ವ್ಯಕ್ತಿಗಳ ಆಲೋಚನೆಯಾಗಿರುತ್ತದೆ. ವಾಸ್ತವದಲ್ಲಿ ರೋಗ, ವೃದ್ಧಾಪ್ಯ ಮತ್ತು ಮರಣವನ್ನು ನೀಡುವ ದೇವನು ಸ್ವತಃ ಈ ರೀತಿ ಹೇಳುತ್ತಾನೆ.

ಈ ಪ್ರಾಪಂಚಿಕ ಜೀವನವು ಮನುಷ್ಯನ ಪಾಲಿಗೆ ಒಂದು ಪರೀಕ್ಷೆಯಾಗಿದೆ. ರೋಗವು ಈ ಜೀವನದ ಒಂದು ಭಾಗ. ವೃದ್ಧಾಪ್ಯವು ಈ ಪರೀಕ್ಷೆ ಕೊನೆಗೊಳ್ಳುತ್ತಿರುವುದರ ಸೂಚನೆ. ಮರಣವು ಈ ಪರೀಕ್ಷೆ ಕೊನೆಗೊಂಡಿದೆ ಎಂಬುದರ ಘೋಷಣೆಯಾಗಿದೆ.

★ $1^1/_2$ ಲಕ್ಷದಷ್ಟು ಜನರು ಪ್ರತಿದಿನ ಈ ಜಗತ್ತಿನಿಂದ ಮರಣಹೊಂದಿ ನಿರ್ಗಮಿಸುತ್ತಿದ್ದಾರೆ. ಈ ಜನರೆಲ್ಲ ಎಲ್ಲಿಗೆ ಹೋಗುತ್ತಾರೆ? ಇದೊಂದು ಪ್ರಮುಖ ಪ್ರಶ್ನೆಯಾಗಿದೆ. ಇದನ್ನು ಯಾರಿಂದಲೂ ಕಡೆಗಣಿಸಲು ಸಾಧ್ಯವಿಲ್ಲ. ಜಗತ್ತಿನಲ್ಲಿ ವಿಜ್ಞಾನಕ್ಕೆ ಈ ಪ್ರಶ್ನೆಗೆ ಸಮರ್ಪಕ ಉತ್ತರವನ್ನು ನೀಡಲು ಸಾಧ್ಯವಿಲ್ಲ. ಕೇವಲ ಧರ್ಮ ಮಾತ್ರ ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ನೀಡಬಲ್ಲುದು. ಧರ್ಮಗಳ ಪೈಕಿಯೂ ಜಗತ್ತಿನ ಸೃಷ್ಟಿಕರ್ತನ ಸಂದೇಶ ಮತ್ತು ಗ್ರಂಥವನ್ನು ಸಂಪೂರ್ಣ ಸುರಕ್ಷಿತವಾಗಿ ಸಂರಕ್ಷಿಸಿರುವ, ಜೀವನ ಮತ್ತು ಮರಣ ನೀಡುವ ಪ್ರಭುವಿನಿಂದ ಬಂದ ಧರ್ಮ ಮಾತ್ರ ಇದಕ್ಕೆ ಸರಿಯಾದ ಉತ್ತರವನ್ನು ನೀಡಲು ಸಾಧ್ಯವಿದೆ.

★ ಪ್ರತಿಯೊಬ್ಬ ಮನುಷ್ಯನ ಈ ಲೌಕಿಕ ಪರೀಕ್ಷಾ ಜೀವನವು ಕೊನೆಗೊಳ್ಳುವ ಸಮಯವು ಸುನಿಶ್ಚಿತವಾಗಿದೆಯೇ? 'ಹೌದು', ಪ್ರತಿಯೊಬ್ಬ ವ್ಯಕ್ತಿಯ ಮರಣದ ಸಮಯವು ನಿಶ್ಚಿತವಿದೆ ಎಂದು ಪವಿತ್ರ ಕುರ್‌ಆನ್ ಹೇಳುತ್ತದೆ.

**''ಯಾವ ಜೀವಿಯೂ ಅಲ್ಲಾಹನ ಅನುಮತಿ ಹೊಂದದೆ ಸಾಯಲಾರದು. ಮರಣದ ಸಮಯವಂತು ಬರೆದಿಡಲ್ಪಟ್ಟಿದೆ. ಐಹಿಕ ಪ್ರತಿಫಲಾಪೇಕ್ಷೆಯಿಂದ ಕೆಲಸ ಮಾಡುವವನಿಗೆ ನಾವು ಇಹದಲ್ಲಿಯೇ ಕೊಡುವೆವು ಮತ್ತು ಪಾರಲೌಕಿಕ ಪ್ರತಿಫಲಾಪೇಕ್ಷೆಯಿಂದ ಕೆಲಸ ಮಾಡುವವನು ಅದನ್ನು ಪರಲೋಕದಲ್ಲಿ ಪಡೆಯುವನು ಮತ್ತು ಕೃತಜ್ಞರಿಗೆ ನಾವು ಅದರ ಪ್ರತಿಫಲವನ್ನು ಖಂಡಿತವಾಗಿಯೂ ದಯಪಾಲಿಸುವೆವು.'' (ಪವಿತ್ರ ಕುರ್‌ಆನ್ 3:145)**

ಮರಣವನ್ನು ಪದೇ ಪದೇ ನೆನಪು ಮಾಡುವುದನ್ನು ಇಸ್ಲಾಮ್ ಇಷ್ಟಪಡುತ್ತದೆ. ಏಕೆಂದರೆ ಇದು ಮನುಷ್ಯನ ಜೀವನದ ಮೇಲೆ ಉತ್ತಮ ಪರಿಣಾಮವನ್ನುಂಟು ಮಾಡುತ್ತದೆ. ಒಳ್ಳೆಯ ಕೆಲಸಗಳನ್ನು ಮಾಡುವಾಗ ಉಂಟಾಗುವ ಆಲಸ್ಯವನ್ನು ಇದು ದೂರಗೊಳಿಸುತ್ತದೆ. ಮನುಷ್ಯ ಒಳಿತುಗಳನ್ನು ಮಾಡಲು ಆತುರನಾಗುತ್ತಾನೆ. ಪಾಪಕೃತ್ಯಗಳನ್ನು ತೊರೆಯಲು ಮತ್ತು ಪಶ್ಚಾತ್ತಾಪ ಪಡಲು ಕೂಡಾ ಉತ್ಸುಕನಾಗುತ್ತಾನೆ. ಯಾರಿಗೂ ಅನ್ಯಾಯವೆಸಗಲು ಅವನು ಮನಸ್ಸು ಮಾಡುವುದಿಲ್ಲ.

ಮರಣವನ್ನು ಸ್ವತಃ ಕರೆಯುವುದನ್ನು ಅರ್ಥಾತ್ ಆತ್ಮಹತ್ಯೆ ಮಾಡಿಕೊಳ್ಳುವುದನ್ನು ಇಸ್ಲಾಮ್ ನಿಷೇಧಿಸುತ್ತದೆ. ಇದು ದೇವನಿಂದ ನಿರಾಶನಾದ ಸೂಚನೆಯಾಗಿದೆ. ಜೀವನದೊಂದಿಗೆ ಮಾಡುವ ವಿದ್ರೋಹವಾಗಿದೆ.

ದೇವ ಸಂದೇಶವಾಹಕರಾದ ಮುಹಮ್ಮದರು(ಸ) ಈ ರೀತಿ ಹೇಳಿರುವರು. ''ನಿಮ್ಮ ಪೈಕಿ ಯಾರೂ ಮರಣವನ್ನು ಅಪೇಕ್ಷಿಸಬಾರದು ಮತ್ತು ಬೇಗನೇ ಮರಣ ಬಂದು ಬಿಡಲಿ ಎಂದು ಪ್ರಾರ್ಥಿಸಬಾರದು. ಏಕೆಂದರೆ ಮರಣದೊಂದಿಗೆ ಮನುಷ್ಯನ ಕರ್ಮಗಳನ್ನು ಮಾಡುವ ಅವಕಾಶವು ಕೊನೆಗೊಳ್ಳುತ್ತದೆ. ದೇವನ ಆದೇಶದ ಪ್ರಕಾರ ಜೀವಿಸುವ ವ್ಯಕ್ತಿಗೆ ಅವನ ಆಯುಷ್ಯವು ಒಳಿತುಗಳನ್ನು ಹೆಚ್ಚಿಸಲು ಇರುವ ಒಂದು ಅವಕಾಶವಾಗಿರುತ್ತದೆ.''
(ಮುಸ್ಲಿಮ್)

''ಮರಣಕ್ಕಾಗಿ ಪ್ರಾರ್ಥಿಸಬೇಡಿರಿ ಮತ್ತು ಅದನ್ನು ಅಪೇಕ್ಷಿಸಬೇಡಿರಿ. ಒಂದು ವೇಳೆ ಯಾರಿಗಾದರೂ ಮರಣಕ್ಕಾಗಿ ಪ್ರಾರ್ಥಿಸುವುದು ಅನಿವಾರ್ಯವೆಂದಾದರೆ ಅವನು ಈ ರೀತಿ ಪ್ರಾರ್ಥಿಸಲಿ. 'ಓ ಅಲ್ಲಾಹ್ ನನಗೆ ಜೀವನ ಉತ್ತಮವಾಗಿರುವ ವರೆಗೆ ನನ್ನನ್ನು ಬದುಕಿಸು. ನನಗೆ ಮರಣವೇ ಉತ್ತಮವೆಂದಾದರೆ ಮರಣವನ್ನು ನೀಡು.'' (ನಸಾಈ)

ಈ ಮೇಲಿನ ವಿವರಣೆಗಳ ಸಾರಾಂಶವೇನೆಂದರೆ ದೇವನು ಏಕೈಕನಾಗಿದ್ದಾನೆ ಎಂಬ ಸಿದ್ಧಾಂತವನ್ನು ನಾವು ಯಾವ ರೀತಿ ಸ್ವೀಕರಿಸಿಕೊಳ್ಳಬೇಕೆಂದರೆ ಅವನ ಗುಣ, ಅಧಿಕಾರ, ಪ್ರಭುತ್ವ ಮತ್ತು ಒಡೆತನದಲ್ಲಿ ಯಾರಿಗೂ ಯಾವುದೇ ಪಾಲಿಲ್ಲ. ಅಂತಿಮ ಪ್ರವಾದಿ ಮುಹಮ್ಮದರು(ಸ) ದೇವನ ಆದೇಶದಂತೆ ಜೀವಿಸುವುದನ್ನು ಹೇಳಿಕೊಟ್ಟರು. ಮಾತ್ರವಲ್ಲ, ಜೀವಿಸಿ ತೋರಿಸಿಕೊಟ್ಟರು. ಅಂತ್ಯ ಪ್ರವಾದಿ ಮುಹಮ್ಮದರಿಗೆ(ಸ) ಅಂತ್ಯ ದೈವಿಕ ಗ್ರಂಥ ಪವಿತ್ರ ಕುರ್‌ಆನ್ ಅವತೀರ್ಣಗೊಂಡಿತು. ಇದು ಇಂದಿಗೂ ಸಂಪೂರ್ಣವಾಗಿ ಸುರಕ್ಷಿತವಾಗಿದೆ. ಇದು ಜಗತ್ತಿನ ಸಕಲ ಮನುಷ್ಯರಿಗೆ ಮಾರ್ಗದರ್ಶಕ ಗ್ರಂಥವಾಗಿದೆ. ಈ ಲೌಕಿಕ ಜೀವನ ಮತ್ತು ಬರಲಿರುವ ಪಾರಲೌಕಿಕ ಜೀವನದಲ್ಲಿ ವಿಜಯಿಗಳಾಗಬೇಕಿದ್ದರೆ ಮತ್ತು ಮುಕ್ತಿಯನ್ನು ಪಡೆಯಬೇಕಿದ್ದರೆ, ಈ ಸತ್ಯವನ್ನು ಒಪ್ಪಿಕೊಳ್ಳಬೇಕು. ದೇವನು ತೋರಿಸಿದ ಸನ್ಮಾರ್ಗದಲ್ಲಿ ನಡೆಯಲೇಬೇಕು.

# ಪರಲೋಕಕ್ಕೆ ಸಿದ್ಧತೆ ಇಂದಿನಿಂದಲೇ

ಡಾ. ಮುಹಮ್ಮದ್ ಝೈನುಲ್ ಆಬಿದೀನ್ ಮನ್ಸೂರಿ.

ಈ ಭೌತಿಕ ಮತ್ತು ಇಹಲೋಕ ಜೀವನವು ಒಂದಲ್ಲ ಒಂದು ದಿನ ಅಂತ್ಯಗೊಳ್ಳಲೇಬೇಕು ಎಂಬುದು ಎಲ್ಲರೂ ಒಪ್ಪುವಂತಹ ಸತ್ಯ. ಈ ಅಂತ್ಯದ ಬಳಿಕ ಏನಾಗಬಹುದು ಎಂಬ ವಿಷಯದಲ್ಲಿ ಮಾತ್ರ ಭಿನ್ನಾಭಿಪ್ರಾಯಗಳಿರಬಹುದು ಮತ್ತು ಭಿನ್ನಾಭಿಪ್ರಾಯಗಳಿವೆ. ಧರ್ಮಗಳು ಮತ್ತು ಆಸ್ತಿಕರ ಪ್ರಕಾರ, ಈ ಅಂತ್ಯದ ಬಳಿಕ ಪುನಃ ಒಂದು ಜೀವನವಿದೆ. ನಾಸ್ತಿಕರು ಮತ್ತು ಧರ್ಮ ವಿರೋಧಿಗಳ ಪ್ರಕಾರ ಈ ಜೀವನದ ಅಂತ್ಯದ ಬಳಿಕ ಮತ್ತೇನೂ ಇಲ್ಲ, ಇನ್ನೊಂದು ಜೀವನವೂ ಇಲ್ಲ, ಮರಣದ ಬಳಿಕ ನಾವು ಶಾಶ್ವತವಾಗಿ ಕೊನೆಗೊಂಡು ಬಿಡುತ್ತೇವೆ ಎಂಬುದು ಅವರ ವಾದ. ಮಣ್ಣಲ್ಲಿ ಮಣ್ಣಾಗಿ ಸೇರಿ ಹೋದ ಬಳಿಕ, ಉರಿದು ಬೂದಿಯಾದ ಬಳಿಕ ನಮ್ಮ ಶರೀರವನ್ನು ಪುನಃ ಈಗಿರುವ ರೀತಿಯಲ್ಲಿ ಉಂಟುಮಾಡಲು ಸಾಧ್ಯವಿಲ್ಲ ಎಂಬುದು ಅವರ ಹೇಳಿಕೆ.

## ಪ್ರಭಾವದಲ್ಲಿ ವ್ಯತ್ಯಾಸ

ಈ ಮೇಲಿನ ಎರಡು ದೃಷ್ಟಿಕೋನಗಳ ಪೈಕಿ ಯಾವುದಾದರೂ ಒಂದನ್ನು ಸ್ವೀಕರಿಸಲು ಮನುಷ್ಯನು ಸ್ವತಂತ್ರನಾಗಿದ್ದಾನೆ. ಅಂದರೆ ಯಾವುದೇ ಒಂದು ವಿಚಾರವನ್ನು ಯಾರ ಮೇಲೂ ಹೇರಲು ಸಾಧ್ಯವಿಲ್ಲ. ಜಗತ್ತಿನ ಸೃಷ್ಟಿಗಳ ಪೈಕಿ ಮನುಷ್ಯನಿಗೆ ಮಾತ್ರ ಬುದ್ಧಿ ವಿವೇಕಗಳು ನೀಡಲ್ಪಟ್ಟಿವೆ. ಆದುದರಿಂದ ಪರಸ್ಪರ ವಿರುದ್ಧವಾಗಿರುವ ಈ ಎರಡು ದೃಷ್ಟಿಕೋನಗಳ ಪೈಕಿ ಯಾವುದಾದರೂ ಒಂದನ್ನು ತನ್ನದಾಗಿಸಿದರೂ ಅದು ನಮ್ಮ ಜೀವನದಲ್ಲಿ (ಆಚಾರ-ವಿಚಾರ, ವ್ಯವಹಾರ, ಚಾರಿತ್ರ್ಯ, ಇತ್ಯಾದಿ) ಉಂಟುಮಾಡುವ ಪ್ರಭಾವವನ್ನು ಅವಶ್ಯವಾಗಿ ಆಲೋಚಿಸಬೇಕು. ಈ ವಿಚಾರವೇ ಮನುಷ್ಯನನ್ನು ಪ್ರಾಣಿಗಿಂತ ಮತ್ತು ರಾಕ್ಷಸರಿಗಿಂತ ಭಿನ್ನವಾಗಿಸುತ್ತದೆ. ಅವರನ್ನು ಶ್ರೇಷ್ಠ, ಆದರಣೀಯ ಮತ್ತು ಗೌರವಾನ್ವಿತರನ್ನಾಗಿಸುತ್ತದೆ.

## ಮೊದಲನೆಯ ದೃಷ್ಟಿಕೋನದಿಂದ ಆಗುವ ಪ್ರಭಾವ

ಧಾರ್ಮಿಕ ದೃಷ್ಟಿಕೋನದ ಮೂಲಾಧಾರ ದೇವನ ಮೇಲೆ ಪರಿಪೂರ್ಣ ವಿಶ್ವಾಸವಾಗಿದೆ. ಇಲ್ಲಿ ದೇವನನ್ನು ಸೃಷ್ಟಿಕರ್ತ, ಸ್ವಾಮಿ, ಪ್ರಭು, ಪರಿಪಾಲಕ, ಪೋಷಕ, ಸಂರಕ್ಷಕ, ನ್ಯಾಯಾಧಿಪತಿ, ಪೂಜ್ಯ ಮತ್ತು ಆರಾಧನೆಗೆ ಅರ್ಹ ಎಂದು ನಂಬಲಾಗಿದೆ. ಈ ದೃಷ್ಟಿಕೋನವನ್ನು ಒಪ್ಪಿಕೊಂಡರೆ, ಮನುಷ್ಯ ದೇವನ ಆಜ್ಞಾಪಾಲಕ, ಕೃತಜ್ಞದಾಸನಾಗುತ್ತಾನೆ. ಅವನ ಜೀವನದ ಸಕಲ ಕೆಲಸಗಳು ಒಳ್ಳೆಯದಾಗಿರುತ್ತದೆ. ಸುಂದರವಾಗಿರುತ್ತದೆ. ಶ್ರೇಷ್ಠವಾಗಿರುತ್ತದೆ. ಇದರಿಂದ ಸ್ಪಷ್ಟವಾಗುವುದೇನೆಂದರೆ ಇವರು ಧಿಕ್ಕಾರಿ, ವಿದ್ರೋಹಿ, ಉಪದ್ರವಿ, ಮರ್ದಕ, ವ್ಯಭಿಚಾರಿ ವ್ಯಕ್ತಿಗಳಿಗಿಂತ ಸಂಪೂರ್ಣ ಭಿನ್ನರಾಗಿರುತ್ತಾರೆ.

## ಎರಡನೆಯ ದೃಷ್ಟಿಕೋನದಿಂದ ಆಗುವ ಪ್ರಭಾವ

ನಾಸ್ತಿಕ, ಅಧರ್ಮಿ ಮತ್ತು ಧರ್ಮವಿಲ್ಲ ಎನ್ನುವ ವ್ಯಕ್ತಿಗಳ ಜೀವನಕ್ಕೂ ಪ್ರಾಣಿಗಳ ಜೀವನ ಮತ್ತು ಉದ್ದೇಶಕ್ಕೂ ಹಾಗೂ ಜೀವನ ಶೈಲಿಗೂ ಸ್ವಲ್ಪ ಮಾತ್ರ ವ್ಯತ್ಯಾಸವಿರುತ್ತದೆ. ಪ್ರಾಣಿಗಳಾದರೆ 'ತಿನ್ನುವುದು, ಕುಡಿಯುವುದು, ಸತ್ತು ಹೋಗುವುದು' ಮತ್ತು ಮನುಷ್ಯರಾದರೆ 'ಕುಡಿಯುವುದು, ತಿನ್ನುವುದು, ಭೋಗಿಸುವುದು, ಮಜಾ ಉಡಾಯಿಸುವುದು, ಸತ್ತು ಹೋಗುವುದು'. ಈ ಸಣ್ಣ ವ್ಯತ್ಯಾಸವು ಮನುಷ್ಯ ಸಮಾಜವನ್ನು ಮತ್ತು ಮಾನವೀಯತೆಯನ್ನು ಹಾಗೂ ಮಾನವೀಯ ಮೌಲ್ಯಗಳನ್ನು ಬಹಳ ಅಧೋಗತಿಗೆ ತಲುಪಿಸುತ್ತದೆ. ಮನುಷ್ಯನ ಗೌರವ, ಹಿರಿಮೆ ಮತ್ತು ಶ್ರೇಷ್ಠತೆಗೆ ಆಘಾತವನ್ನುಂಟು ಮಾಡುತ್ತದೆ ಮತ್ತು ಸಂಪೂರ್ಣವಾಗಿ ಅಥವಾ ಆಂಶಿಕವಾಗಿ ನಷ್ಟಗೊಳಿಸಿ ಬಿಡುತ್ತದೆ. ಈ ಕಾರಣದಿಂದಾಗಿಯೇ ಸಮಾಜದಲ್ಲಿ ಲೂಟಿ, ಕೊಲೆ, ಮರ್ದನ, ಶೋಷಣೆ, ಅನಾಚಾರ, ಹೊಡಿ-ಬಡಿ, ಕ್ಷೋಭೆ, ವ್ಯಭಿಚಾರ, ಅನ್ಯಾಯ, ಭ್ರಷ್ಟಾಚಾರ ತುಂಬಿದೆ. ಹೆಚ್ಚುತ್ತಿರುವ ಅಪರಾಧ ಕೃತ್ಯಗಳು ಸಮಾಜವನ್ನು ವಿಕೃತಗೊಳಿಸುತ್ತಿದೆ. ಈ ಸಮಸ್ಯೆಗಳಿಗೆ ಮುಖ್ಯವಾಗಿ ಮೂರು ಕಾರಣಗಳಿವೆ.

ಒಂದನೆಯದು- ದೇವ ಮತ್ತು ಧರ್ಮದ ನಿರಾಕರಣೆ.

ಎರಡನೆಯದು- ಧರ್ಮದ ಮೇಲೆ ನಂಬಿಕೆಯಿದ್ದರೂ ಅದನ್ನು ಪಾಲಿಸುವಲ್ಲಿ ಉದಾಸೀನತೆ ಮತ್ತು ಅದರಿಂದ ಮುಖ ತಿರುಗಿಸುವುದು.

ಮೂರನೆಯದು- 75% ಜನರು ಧರ್ಮದ ಮೇಲೆ ವಿಶ್ವಾಸವಿಟ್ಟರೂ ಅವರ ಧಾರ್ಮಿಕ ನಂಬಿಕೆಗಳಲ್ಲಿ ದೇವನ ಮುಂದೆ ಉತ್ತರಿಸಬೇಕಾಗಿದೆ ಎಂಬ ಉತ್ತರದಾಯಿತ್ವದ ಪ್ರಜ್ಞೆ ಇಲ್ಲವಾಗಿದೆ. ದೇವನ ಮುಂದೆ ಉತ್ತರಿಸಬೇಕಾಗಿದೆ ಎಂಬ ಪ್ರಬಲ ವಿಶ್ವಾಸವು ಮನುಷ್ಯನನ್ನು (ಮತ್ತು ಅವನಿಂದ ಉಂಟಾದ ಸಾಮೂಹಿಕ ಮತ್ತು ಸಾಮಾಜಿಕ ವ್ಯವಸ್ಥೆಯು) ಸತ್ಯ,

ಪ್ರಾಮಾಣಿಕ, ಸಚ್ಚರಿತ, ಉಪಕಾರಿ ಮತ್ತು ವಿನಯವಂತನನ್ನಾಗಿ ಮಾಡುತ್ತದೆ. ಕೆಡುಕು, ದುಷ್ಕೃತ್ಯ, ಸುಳ್ಳು, ಅತ್ಯಾಚಾರ, ಅನ್ಯಾಯ ಮತ್ತು ಉಪದ್ರವಗಳಿಂದ ಅವನನ್ನು ರಕ್ಷಿಸುತ್ತದೆ.

## ಇಸ್ಲಾಮಿನ ನಿಲುವು

ಇಸ್ಲಾಮ್ ಈ ಜೀವನದ ಬಳಿಕ ಇನ್ನೊಂದು ಜೀವನವಿದೆ ಎಂದು ತಿಳಿಸುತ್ತದೆ. ಈ ವಿಶ್ವಾಸವು ಇಸ್ಲಾಮಿನ ಮೂರು ಮೂಲಭೂತ ವಿಶ್ವಾಸಗಳಾದ ಏಕದೇವತ್ವ, ಪ್ರವಾದಿತ್ವ ಮತ್ತು ಪರಲೋಕಗಳ ಪೈಕಿ ಒಂದಾಗಿದೆ. ಇದರ ಸರಳವಾದ ಮತ್ತು ನೇರವಾದ ವಿವರಣೆ ಈ ರೀತಿ ಇದೆ.

ಮನುಷ್ಯನಿಗೆ ಈ ಲೋಕದಲ್ಲಿ ಒಂದು ನಿಶ್ಚಿತ ಅವಧಿಯ ಜೀವನವನ್ನು ನೀಡಲಾಗಿದೆ. ಆದರೆ ವಾಸ್ತವದಲ್ಲಿ ಮನುಷ್ಯನ ಜೀವನವು ಸುದೀರ್ಘವಾಗಿದೆ. ಈ ಜೀವನಕ್ಕೆ ವಿಭಿನ್ನವಾದ ಎರಡು ಭಾಗಗಳಿವೆ. ಆದರೆ ವಾಸ್ತವದಲ್ಲಿ ಒಂದು ಇನ್ನೊಂದಕ್ಕೆ ಪೂರಕವಾಗಿದೆ ಮತ್ತು ಪರಸ್ಪರ ಸಂಬಂಧವನ್ನು ಹೊಂದಿದೆ. ಇಲ್ಲಿ ಇಹಲೋಕದ ಜೀವನವು ಕೊನೆಗೊಳ್ಳುತ್ತದೆ. ಆತ್ಮವು ಮುಂದಿನ(ಪರಲೋಕ) ಜೀವನವನ್ನು ತಲುಪುತ್ತದೆ. ಕಿಯಾಮತ್‌ನ(ಅಂತ್ಯದಿನದ ಮಹಾಪ್ರಳಯ) ಬಳಿಕ ಮನುಷ್ಯನ ಶರೀರವನ್ನು ಸೃಷ್ಟಿಕರ್ತನು ತನ್ನ ಅದ್ಭುತ ಸೃಷ್ಟಿ ಸಾಮರ್ಥ್ಯದಿಂದ ಪುನಃ ಸೃಷ್ಟಿಸುವನು ಮತ್ತು ಅದಕ್ಕೆ ಅದೇ ಆತ್ಮವನ್ನು ಪುನಃ ಸೇರಿಸಲಾಗುವುದು. ಲೋಕದ ಆರಂಭದಿಂದ ಅಂತ್ಯದ ವರೆಗೆ ಬಂದ ಎಲ್ಲ ಮನುಷ್ಯರು ದೇವನ ಮುಂದೆ ಹಾಜರುಗೊಳಿಸಲ್ಪಡುವರು. ಪ್ರತಿಯೊಬ್ಬರ ಜೀವನದ 'ಕರ್ಮಪತ್ರ'ವನ್ನು ತೆರೆಯಲಾಗುವುದು. ಸಂಪೂರ್ಣ ನ್ಯಾಯದೊಂದಿಗೆ ವಿಚಾರಣೆ ನಡೆಯುವುದು. ವರ್ಗ, ವಂಶ, ಭಾಷೆ, ಬಣ್ಣ, ಜನಾಂಗ, ಜಾತಿ, ಅಂತಸ್ತು ಮತ್ತು ರಾಷ್ಟ್ರೀಯತೆಯ ಆಧಾರದಲ್ಲಿ ಯಾರ ಮೇಲೂ ಅಲ್ಪವೂ ಪಕ್ಷಪಾತ ತೋರಿಸಲಾಗದು. ಈ ಜಗತ್ತಿನಲ್ಲಿ ಇರುವ ಎಲ್ಲ ಬಡವ-ಬಲ್ಲಿದ, ರಾಜ-ಪ್ರಜೆ, ಮಾಲಿಕ-ನೌಕರ, ಪ್ರಬಲ-ದುರ್ಬಲ, ಅಧಿಕಾರಿ-ಅಧಿಕಾರಹೀನ, ಉಚ್ಚ-ನೀಚ ಇತ್ಯಾದಿ ಎಲ್ಲ ವ್ಯತ್ಯಾಸಗಳು ಮಹಾನನೂ ಸರ್ವಾಧಿಕಾರಿಯೂ ನ್ಯಾಯಾಧಿಪತಿಯೂ ನಿಷ್ಪಕ್ಷಪಾತಿಯೂ ಸರ್ವಶಕ್ತನೂ ಸೂಕ್ಷ್ಮದರ್ಶಿಯೂ ಆದ ಪ್ರಭುವಿನ ನ್ಯಾಯಾಲಯದಲ್ಲಿ ಕೊನೆಗೊಳ್ಳುವುದು. ಅಂದು ಎಲ್ಲರೊಂದಿಗೂ ದೋಷರಹಿತ, ಕುಂದು ಕೊರತೆಗಳಿಲ್ಲದ ನ್ಯಾಯ ಪಾಲನೆಯಾಗುವುದು. ಪ್ರತಿಯೊಬ್ಬ ಮನುಷ್ಯನ ಜೀವನದ ಪೂರ್ಣ ಲೆಕ್ಕಪತ್ರ, ಕರ್ಮಪತ್ರ ಮತ್ತು ಪರಿಣಾಮ ಪತ್ರ ನೀಡಲ್ಪಡುವುದು. ಕೆಲವರಿಗೆ ಸ್ವರ್ಗಕ್ಕೆ ಹೋಗುವ ಮತ್ತು ಕೆಲವರಿಗೆ ನರಕಕ್ಕೆ ಹೋಗುವ ಫಲಿತಾಂಶ ನೀಡಲ್ಪಡುವುದು. ಸ್ವರ್ಗದಲ್ಲಿ ಸುಖ, ಸಂತೋಷ, ವೈಭವ, ಆರಾಮ, ಶಾಂತಿ ಇತ್ಯಾದಿ ಎಲ್ಲ ಅನುಗ್ರಹಗಳ ಮಧ್ಯೆ ಶಾಶ್ವತವಾದ ಮತ್ತು ಅಮರವಾದ ಜೀವನ

ಸಿಗುವುದು. ಈ ಕ್ಷಣಿಕ, ಕುಂದುಕೊರತೆಗಳಿಂದ ತುಂಬಿದ, ನಶ್ವರ ಮತ್ತು ಸೀಮಿತವಾದ ಜೀವನದಲ್ಲಿ ಆ ಸ್ವರ್ಗಲೋಕದ ವೈಭವವನ್ನು ಊಹಿಸಲೂ ಸಾಧ್ಯವಿಲ್ಲ, ನರಕದಲ್ಲಿ ದುಃಖ, ವೇದನೆ, ಶಿಕ್ಷೆ, ಅಗ್ನಿ ಮತ್ತು ದೇವಕ್ರೋಧದ ಮಧ್ಯೆ ಸುದೀರ್ಘವಾದ ಶಾಶ್ವತ ಜೀವನವಿರುವುದು. ಇದರ ಭಯಾನಕತೆ, ಸಂಕಷ್ಟ ಮತ್ತು ಶಿಕ್ಷೆಯ ಕಲ್ಪನೆಯನ್ನು ಊಹಿಸುವುದೂ ಅಸಾಧ್ಯ.

## ಮಾನವ ಪ್ರಕೃತಿಯ ಬೇಡಿಕೆ

ಮಾನವ ಪ್ರಕೃತಿಯು ತನ್ನ ಸಹಜ ರೂಪದಲ್ಲಿ ಇದ್ದಲ್ಲಿ ಅಥವಾ ವಿಭಿನ್ನವಾದ ಆಂತರಿಕ ಮತ್ತು ಬಾಹ್ಯ ಕಾರಣಗಳು ಅವನಲ್ಲಿ ವಿಭಿನ್ನ ವಿಕಾರ ಜಗಳ ಮತ್ತು ಅನೀತಿಯನ್ನು ಉಂಟು ಮಾಡದೇ ಇದ್ದಲ್ಲಿ ಅವನ ಸಹಜ ಸ್ವಭಾವವು ಅವನ ಆಂತರ್ಯದಲ್ಲಿ ಈ ಕೆಳಗಿನ ಬೇಡಿಕೆಗಳನ್ನಿಡುತ್ತದೆ.

★ ಒಳಿತು ಮತ್ತು ಕೆಡುಕುಗಳನ್ನು ಮಾಡಿದ ವ್ಯಕ್ತಿಗಳು ಮರಣದ ಬಳಿಕ ಒಂದೇ ರೀತಿಯ ಪರಿಣಾಮವನ್ನು ಎದುರಿಸಬಾರದು. ಅಂದರೆ ಸತ್ತು ಮಣ್ಣಾಗಿ ಎಲ್ಲರೂ ನಾಶ ಹೊಂದಬಾರದು. ಇಲ್ಲಿಯೇ ಅವರ ಜೀವನದ ಕತೆಯು ಮುಗಿದು ಹೋಗಬಾರದು.

★ ದೇವಧಿಕ್ಕಾರಿಗಳು, ಆಜ್ಞೋಲ್ಲಂಘಕರು, ದೇವನನ್ನು ನಿರಾಕರಿಸುವವರು ಮತ್ತು ದೇವನನ್ನು ನಂಬುವವರು, ದೇವನ ಆಜ್ಞಾನುಸಾರಿಗಳು, ದೇವಭಯವುಳ್ಳವರು ಇವರೀರ್ವರ ಮರಣದ ಬಳಿಕದ ಪರಿಣಾಮವು ಅವರ ಈ ಜೀವನದ ಕರ್ಮಗಳಿಗೆ ಅನುಸಾರವಾಗಿ ಭಿನ್ನಭಿನ್ನವಾಗಿರಬೇಕು.

★ ಈ ಲೋಕದಲ್ಲಿ ಅನ್ಯಾಯ, ಅತ್ಯಾಚಾರ ಎಸಗಿದವರು ಮತ್ತು ಈ ಮೂಲಕ ಸಂಪತ್ತನ್ನು ಸಂಗ್ರಹಿಸಿದವರು, ಅಧಿಕಾರವನ್ನು ಗಳಿಸಿದವರು. ಶಿಫಾರಸು, ಲಂಚ, ಬೆದರಿಕೆ, ಮೋಸ ಇತ್ಯಾದಿಗಳನ್ನು ಮಾಡಿ ಈ ಲೋಕದ ನ್ಯಾಯಾಲಯದಿಂದ ದೋಷಪೂರ್ಣ ವ್ಯವಸ್ಥೆ ಸೀಮಿತತೆ ಮತ್ತು ಪಕ್ಷಪಾತದ ವ್ಯವಸ್ಥೆಯಿಂದಾಗಿ ನಿರ್ದೋಷಿ ಎಂದು (clean chit) ಹೊರಬಂದವರು. ಇಲ್ಲವಾದಲ್ಲಿ ಸ್ವಲ್ಪ ಸಮಯದ ಹೆಸರಿಗೆ ಮಾತ್ರ ಇರುವ ಶಿಕ್ಷೆ, ಆಂಶಿಕವಾದ ಶಿಕ್ಷೆ (Symbolic) ಪಡೆದು ಹೊರಬಂದವರು. ಹಾಗಾದರೆ ಇವರಿಗೆಲ್ಲ ಇವರ ಕೃತ್ಯಗಳಿಗೆ ಸಿಗಬೇಕಾದ ಸರಿಯಾದ ಶಿಕ್ಷೆಯು ಈ ಲೋಕದಲ್ಲಿ ಸಿಗಲೇ ಇಲ್ಲ, ಅಂತಹವರಿಗೆ ಪೂರ್ಣ ಶಿಕ್ಷೆ ಸಿಗಲೇಬೇಕು.

★ ಈ ಜೀವನದಲ್ಲಿ ಯಾರೊಂದಿಗೆಲ್ಲ ಅನ್ಯಾಯವಾಗಿದೆಯೋ ಯಾರ ಅಧಿಕಾರ ಕಿತ್ತುಕೊಳ್ಳಲಾಗಿದೆಯೋ ಯಾರನ್ನು ವಿವಿಧ ರೀತಿಯಲ್ಲಿ ಶೋಷಿಸಲಾಗಿದೆಯೋ ಯಾರಿಗೆ ದೋಷಪೂರ್ಣವಾದ ಸೀಮಿತ ನ್ಯಾಯ ಸಿಕ್ಕಿದೆಯೋ ಪೂರ್ಣವಾಗಿ ಸಿಗಲಿಲ್ಲವೋ ಇಂತಹವರಿಗೆಲ್ಲ ಯಾವಾಗಲಾದರೂ ಪರಿಪೂರ್ಣ ನ್ಯಾಯ ಸಿಗಲೇಬೇಕು. ಏಕೆಂದರೆ

ದೇವನು ಈ ಜಗತ್ತನ್ನು, ಅದರ ವ್ಯವಸ್ಥೆಯನ್ನು ಅರಾಜಕತೆ(Anarchy)ಯ ವಶಕ್ಕೆ ಬಿಟ್ಟು ಕೊಟ್ಟಿರಲು ಸಾಧ್ಯವಿಲ್ಲ. ಆ ರೀತಿ ದೇವನ ಬಗ್ಗೆ ಊಹಿಸಲೂ ಸಾಧ್ಯವಿಲ್ಲ.

* ಈ ಜಗತ್ತಿನಲ್ಲಿ ಕೆಲವರು ಎಷ್ಟೇ ದೊಡ್ಡ ನಷ್ಟವಾದರೂ ಎಷ್ಟೇ ಕಷ್ಟಗಳನ್ನು ಸಹಿಸಿದರೂ ಎಷ್ಟೇ ದೊಡ್ಡ ಸವಾಲುಗಳನ್ನು ಎದುರಿಸಿದರೂ ಸತ್ಯವನ್ನು, ಸತ್ಯ ಮಾರ್ಗವನ್ನು ಕೈ ಬಿಡುವುದಿಲ್ಲ. ಅವರು ಸಚ್ಚರಿತರಾಗಿಯೇ ಬಾಳಿಕೊಂಡಿದ್ದರು. ಅನಾಚಾರ, ಶೋಷಣೆ, ಉಪದ್ರವ, ಅರಾಜಕತೆ, ಮೋಸ, ಅನ್ಯಾಯದ ಬಿರುಗಾಳಿಯೆದ್ದರೂ ಅವರ ಕಾಲುಗಳು ಸತ್ಯದ ಮಾರ್ಗದಲ್ಲೇ ಸ್ಥಿರವಾಗಿ ಉಳಿದವು. ಅವರಿಗೆ ಈ ಲೋಕದಲ್ಲಿ ಅವರ ಈ ಸದಾಚಾರ, ಮತ್ತು ಸತ್ಯ ನಿಷ್ಠೆಗಾಗಿ ಉತ್ತಮವಾದ ಸರಿಯಾದ ಪ್ರತಿಫಲ, ಬಹುಮಾನ, ಪುರಸ್ಕಾರ ಸಿಗಲೇ ಇಲ್ಲ. ಇವುಗಳು ಸಿಗಬೇಕಿದ್ದರೆ ಇನ್ನೊಂದು ಜೀವನ, ಅವಕಾಶ, ಇನ್ನೊಂದು ಸ್ಥಳ ಸಿಗಬೇಕಾದ ಅವಶ್ಯಕತೆ ಖಂಡಿತವಾಗಿಯೂ ಇದೆ.

## ಇಸ್ಲಾಮಿನ ಪರಲೋಕ ವಿಶ್ವಾಸ

ಇಸ್ಲಾಮಿನಲ್ಲಿರುವ ಪರಲೋಕ ವಿಶ್ವಾಸವು ಮಾನವ ಜೀವನದ ನಿರೀಕ್ಷೆಗಳನ್ನು ಸರಿಯಾದ ರೀತಿಯಲ್ಲಿ ಪೂರ್ತೀಕರಿಸುತ್ತದೆ. ಇದು ಮನುಷ್ಯ ಪ್ರಕೃತಿಗೆ ಅನುಗುಣವಾಗಿದೆ ಮತ್ತು ವಿವೇಕಪೂರ್ಣವಾಗಿದೆ. ಇದು ಮಾನವ ಪ್ರಕೃತಿಯಲ್ಲಿರುವ ಈ ಮೇಲಿನ ಬೇಡಿಕೆಗಳನ್ನು ಸರಿಯಾದ ವಿಧಾನದಲ್ಲಿ, ವಿವೇಕಪೂರ್ಣವಾಗಿ, ನ್ಯಾಯಯುತವಾಗಿ ಮತ್ತು ಸಂಪೂರ್ಣವಾಗಿ ಸಂತೃಪ್ತಿಪಡಿಸುತ್ತದೆ ಹಾಗೂ ಪೂರ್ತಿಗೊಳಿಸುತ್ತದೆ.

## ಇತರ ನಂಬಿಕೆಗಳೊಂದಿಗೆ ತುಲನೆ

ಮರಣಾನಂತರದ ಜೀವನದ ಬಗ್ಗೆ ವಿವಿಧ ರೀತಿಯ ನಂಬಿಕೆಗಳು ಈ ಜಗತ್ತಿನಲ್ಲಿ ಇವೆ. ಇವುಗಳ ಮೇಲೆ ತುಲನಾತ್ಮಕ ಮತ್ತು ಸರಿಯಾದ ದೃಷ್ಟಿಕೋನವನ್ನು ಹರಿಸಿದರೆ ಇಸ್ಲಾಮಿನಲ್ಲಿರುವ ವಿಶ್ವಾಸದ ಶ್ರೇಷ್ಠತೆ ಮತ್ತು ವಿಶಿಷ್ಟತೆ ಸುಲಭದಲ್ಲಿ ಮನವರಿಕೆಯಾಗುತ್ತದೆ.

1. ಒಂದು ನಂಬಿಕೆಯ ಪ್ರಕಾರ, ಯಾವುದಾದರೊಂದು ಶಕ್ತಿ ಅಥವಾ ವ್ಯಕ್ತಿಯ ಮೇಲೆ ವಿಶ್ವಾಸವನ್ನು ಹೊಂದಿದರೆ ಅದೇ ಪರಲೋಕ ಮೋಕ್ಷ ಮತ್ತು ಸ್ವರ್ಗವನ್ನು ಹೊಂದಲು ಸಾಕಾಗುತ್ತದೆ. ಈ ವಿಶ್ವಾಸದ ನಂತರ ವ್ಯಕ್ತಿ ಮಾಡುವ ಒಳಿತು-ಕೆಡುಕು, ಒಳ್ಳೆಯ ಕೆಟ್ಟ ಕೆಲಸ, ಪಾಪ-ಪುಣ್ಯ ಇತ್ಯಾದಿಗಳು ನಿರರ್ಥಕವೆನಿಸುತ್ತದೆ. ಈ ರೀತಿಯ ನಂಬಿಕೆಯಿಂದ ಯಾವ ರೀತಿಯ ಸಮಾಜ ಉಂಟಾಗಬಹುದು? ಯಾವ ರೀತಿಯ ಚಾರಿತ್ರ್ಯ, ನೈತಿಕ ವಾತಾವರಣ ಉಂಟಾಗಬಹುದು? ಇದರ ಬಗ್ಗೆ ಆಲೋಚಿಸುವುದೇ ವ್ಯರ್ಥವೆನಿಸಬಹುದು. ಕಳೆದ ಅರ್ಧ ಶತಮಾನದಿಂದ ಇಡೀ ಜಗತ್ತಿನಲ್ಲಿ ಆರಂಭವಾಗಿರುವ

ಇಂತಹ ನಂಬಿಕೆಯಿಂದಾಗಿ ಯಾವ ರೀತಿಯ ಮಾನಸಿಕತೆ ಮತ್ತು ಸಭ್ಯತೆಯ ಸಂಸ್ಕೃತಿ ಉಂಟಾಗಿದೆ ಎಂಬುದನ್ನು ಈ ಜಗತ್ತಿನ ಪರಿಸ್ಥಿತಿಯನ್ನು ನೋಡಿಯೇ ಅಂದಾಜಿಸಬಹುದು. ಈ ನಂಬಿಕೆಯ ದುಷ್ಪರಿಣಾಮ ಮತ್ತು ದುಷ್ಪ್ರಭಾವಗಳನ್ನು ಗ್ರಹಿಸಬಹುದಾಗಿದೆ.

2. ಇನ್ನೊಂದು ನಂಬಿಕೆಯ ಪ್ರಕಾರ ಈ ಜಗತ್ತೇ ಉತ್ತಮ ವ್ಯಕ್ತಿಗಳಿಗೆ ಸ್ವರ್ಗ ಮತ್ತು ಕೆಟ್ಟ ವ್ಯಕ್ತಿಗಳ ಪಾಲಿಗೆ ನರಕವಾಗಿದೆ. ಆದುದರಿಂದ ಪರಲೋಕ ಜೀವನದ ಅವಶ್ಯಕತೆಯೇ ಇಲ್ಲ. ಈ ರೀತಿ ನಂಬಿರುವ ವ್ಯಕ್ತಿಗಳು ಜೀವನದಲ್ಲಿ ಬರುವ ವಿಷಯಗಳನ್ನು ಬಹಳ ಆಲೋಚಿಸಿ, ಅಧ್ಯಯನದಿಂದ ವಿಶ್ಲೇಷಣೆ ನಡೆಸಿ, ಸೂಕ್ತ ಜ್ಞಾನ ಸಂಪಾದಿಸಿಕೊಂಡು, ಬಹಳ ಬುದ್ಧಿವಂತಿಕೆಯಿಂದ ಗಂಭೀರವಾಗಿ ತೆಗೆದುಕೊಳ್ಳುತ್ತಾರೆ. ಈ ಜಗತ್ತಿನಲ್ಲೇ ನಮ್ಮ ಒಳಿತುಗಳಿಗೆಲ್ಲ ಪುರಸ್ಕಾರ ಮತ್ತು ದುಷ್ಕೃತ್ಯಗಳಿಗೆ ಶಿಕ್ಷೆ ಸಿಗುತ್ತದೆ ಎಂದು ಪರಿಗಣಿಸಲಾಗುತ್ತದೆ. ಇದು ಅವಾಸ್ತವಿಕ ಮತ್ತು ಅತಾರ್ಕಿಕವಾಗಿದೆ. ನಮ್ಮ ದೈನಂದಿನ ಅನುಭವಗಳಿಗೆ ಈ ನಂಬಿಕೆ ತದ್ವಿರುದ್ಧವೂ ಪ್ರತಿಕೂಲವೂ ಆಗಿದೆ.

3. ಮೂರನೆಯ ನಂಬಿಕೆಯ ಪ್ರಕಾರ, ಈ ಜೀವನದ ನಂತರ ಮನುಷ್ಯನ ಕರ್ಮಗಳಿಗೆ ಅನುಸಾರ ಆತ್ಮವು ಒಳ್ಳೆಯ ಅಥವಾ ಕೆಟ್ಟ ಶರೀರದಲ್ಲಿ ಹೋಗಿ ನೆಲೆಸುತ್ತದೆ. ಈ ರೀತಿ ಜೀವನ-ಮರಣದೊಂದಿಗೆ 'ಶರೀರ ಪರಿವರ್ತನೆಯ' ಕ್ರಮವೂ ನಿರಂತರ ನಡೆಯುತ್ತಿರುತ್ತದೆ. ಈ ನಂಬಿಕೆಯ ದೌರ್ಬಲ್ಯವೇನೆಂದರೆ, ಈ ನಂಬಿಕೆಯು ಮನುಷ್ಯನ ಈ ಲೌಕಿಕ ಜೀವನದಲ್ಲಿ ಅವನ ಚಾರಿತ್ರ್ಯದ ಮೇಲೆ ಸರಿಯಾದ, ಪ್ರಭಾವಶಾಲಿಯಾದ, ಸಕ್ರಿಯ ಪರಿಣಾಮ ಬೀರಲು ವಿಫಲವಾಗುತ್ತದೆ. ಪರಲೋಕದಲ್ಲಿ ದೇವನ ಮುಂದೆ ಈ ಲೌಕಿಕ ಜೀವನದ ಬಗ್ಗೆ ನಾನು ಉತ್ತರಿಸಬೇಕಾಗಿದೆ ಎಂಬ ಕಲ್ಪನೆಯನ್ನು ಮೂಡಿಸುವಲ್ಲಿ ಅಪರ್ಯಾಪ್ತವಾಗಿದೆ. ಅಸಮರ್ಥವಾಗಿದೆ ಮತ್ತು ವಿಫಲವಾಗಿದೆ.

ಈ ಮೇಲೆ ಪ್ರಸ್ತಾಪಿಸಲಾಗಿರುವ ಮರಣಾನಂತರ ಜೀವನದ ಇಸ್ಲಾಮಿನ ಕಲ್ಪನೆಯಲ್ಲಿ ಈ ಮೇಲಿನ ಕೊರತೆಗಳನ್ನು, ಸೀಮಿತತೆಯನ್ನು ನೀಗಿಸಲು ಸಾಧ್ಯವಾಗುತ್ತದೆ. ಇಸ್ಲಾಮಿನ ದೃಷ್ಟಿಕೋನವು ಬಹಳ ಸ್ಪಷ್ಟವಾಗಿದೆ ಮತ್ತು ನಿಶ್ಚಿತವಾಗಿದೆ. (ಎಲ್ಲ ರೀತಿಯ ಭ್ರಮೆ, ತೊಡಕು ಮತ್ತು ಜಟಿಲತೆಗಳಿಂದ ಮುಕ್ತವಾಗಿದೆ.) ಇಸ್ಲಾಮಿನ ಸಿದ್ಧಾಂತವೇನೆಂದರೆ;

1) ಪ್ರತಿಯೊಬ್ಬ ವ್ಯಕ್ತಿಯ ಪ್ರತಿಯೊಂದು ಕೆಲಸ ಅದು ಏಕಾಂತದಲ್ಲಿ ಮಾಡಿದ್ದಾಗಿರಲಿ ಅಥವಾ ಜನರ ಮುಂದೆ ಮಾಡಿರಲಿ, ಕತ್ತಲೆಯಲ್ಲೇ ಮಾಡಿರಲಿ ಅಥವಾ ಹಗಲಲ್ಲೇ ಮಾಡಿರಲಿ ಎಲ್ಲವನ್ನೂ ಅಲ್ಲಾಹನ ದೇವಚರರು ಬರೆದಿಡುತ್ತಿದ್ದಾರೆ.

2) ಸರ್ವ ಶಕ್ತನಾದ ದೇವನು ಪ್ರಥಮ ಬಾರಿ ಯಾವ ರೀತಿಯಲ್ಲಿ ತನ್ನ ಅಸಾಮಾನ್ಯ ಶಕ್ತಿ, ಸಾಮರ್ಥ್ಯದಿಂದ ಮನುಷ್ಯನನ್ನು ಸೃಷ್ಟಿಸಿದ್ದಾನೋ (ಮೊದಲು ಅವನು ಅಸ್ತಿತ್ವದಲ್ಲೇ ಇರಲಿಲ್ಲ) ಅದೇ ರೀತಿ ಪುನಃ ಅವನನ್ನು ಸೃಷ್ಟಿಸುವುದು (ಆಗ ಮನುಷ್ಯನ ಅವಶೇಷ

ಮತ್ತು ಡಿ.ಎನ್.ಎ ಈ ಭೂಮಂಡಲ, ವಾಯು ಮಂಡಲ ಮತ್ತು ಬ್ರಹ್ಮಾಂಡದಲ್ಲಿ ಎಲ್ಲಾದರೊಂದು ಕಡೆ ಯಾವುದಾದರೊಂದು ರೂಪದಲ್ಲಿ ಅಸ್ತಿತ್ವದಲ್ಲಿರುವುದು) ಅಸಾಧ್ಯವೆಂಬುದು ದೂರದ ಮಾತು ಅದು ಅವನಿಗೆ ಸ್ವಲ್ಪವೂ ಕಠಿಣವಾಗಿರಲಾರದು.

3) ಪ್ರತಿಯೊಬ್ಬ ಮನುಷ್ಯನಿಗೂ ಜೀವನ ಪೂರ್ತಿ ಮಾಡಿದ ಕರ್ಮಗಳ ಸರ್ವ ಸಂಪೂರ್ಣ ಪ್ರತಿಫಲ ಪರಲೋಕದಲ್ಲಿ ಸಂಪೂರ್ಣ ನ್ಯಾಯದೊಂದಿಗೆ ನೀಡಲಾಗುವುದು.

4) ಇದರ ಪ್ರತಿಫಲ ಒಂದೋ ಸ್ವರ್ಗ ಅಥವಾ ನರಕವಾಗಿರುವುದು.

## ಪರಲೋಕ ಜೀವನ ಕುರ್‌ಆನಿನಲ್ಲಿ

ಇಸ್ಲಾಮಿನ ಮೂಲ ಸ್ರೋತ 'ಕುರ್‌ಆನ್' ಎಂಬ ಹೆಸರಿನ ದೇವ ಗ್ರಂಥವಾಗಿದೆ. ಅದರ ಐತಿಹಾಸಿಕತೆ ಮತ್ತು ವಿಶ್ವಸನೀಯತೆಯ ಬಗ್ಗೆ ಜಗತ್ತಿನ (ಮುಸ್ಲಿಮ್ ಮತ್ತು ಮುಸ್ಲಿಮೇತರ) ಎಲ್ಲಾ ನಿಷ್ಪಕ್ಷಪಾತಿ, ಪೂರ್ವಾಗ್ರಹ ಪೀಡಿತರಲ್ಲದ ವಿದ್ವಾಂಸರು, ಬುದ್ಧಿ ಜೀವಿಗಳು ಮತ್ತು ಸಂಶೋಧಕರು ಸಂಪೂರ್ಣ ವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ. ಇದು ಆರಂಭದಿಂದ ಅಂತ್ಯದವರೆಗೆ, ಪ್ರತಿಯೊಂದು ಶಬ್ದವೂ, ದೇವವಾಣಿಯಾಗಿದೆ. ಎಲ್ಲ ರೀತಿಯ ಮಾನವ ಹಸ್ತಕ್ಷೇಪದಿಂದ ಮುಕ್ತವಾದ ಪವಿತ್ರ ದೇವ ಗ್ರಂಥವಾಗಿದೆ. ಇದರಲ್ಲಿ ಮಾನವ ಜೀವನಕ್ಕೆ ಸಂಬಂಧಿಸಿದ ಸಂಪೂರ್ಣ ಮಾರ್ಗದರ್ಶನವಿದೆ. ಮನುಷ್ಯನ ಯೋಗ್ಯತೆ, ಅವನ ಸೃಷ್ಟಿಯ ಉದ್ದೇಶ, ದೇವನ ಸರಿಯಾದ ಪರಿಚಯ, ಮನುಷ್ಯ ಮತ್ತು ದೇವನ ನಡುವೆ ಇರುವ ಸಂಬಂಧ, ಮನುಷ್ಯ ಮನುಷ್ಯರ ನಡುವೆ ಇರುವ ಸಂಬಂಧ, ಕರ್ತವ್ಯಗಳು, ಅಧಿಕಾರ, ಆರಾಧನೆಯ ವಿಧಾನಗಳು ಮತ್ತು ಅದರ ವಾಸ್ತವಿಕತೆ, ಮನುಷ್ಯನ ಮರಣಾನಂತರ ಜೀವನದ ಬಗ್ಗೆ ವಿಸ್ತೃತವಾದ, ವಿವರವಾದ ವರ್ಣನೆ ಇತ್ಯಾದಿಗಳಿವೆ. ಪರಲೋಕ ಜೀವನಕ್ಕೆ ಸಂಬಂಧಿಸಿದಂತೆ ಕುರ್‌ಆನಿನಲ್ಲಿರುವ ಅನೇಕ ಸೂಕ್ತಗಳ ಪೈಕಿ ಕೆಲವು ಈ ಕೆಳಗಿನಂತಿವೆ.

**''ಆದರೆ ನಿಸ್ಸಂದೇಹವಾಗಿಯೂ ಬರಲಿರುವ ಅದೊಂದು ದಿನ ನಾವು ಅವರನ್ನು ಒಟ್ಟುಗೂಡಿಸಿದಾಗ ಅವರ ಅವಸ್ಥೆ ಏನಾದೀತು? ಅಂದು ಪ್ರತಿಯೊಬ್ಬನಿಗೂ ಅವನ ದುಡಿಮೆಯ ಸಂಪೂರ್ಣ ಪ್ರತಿಫಲ ಕೊಡಲಾಗುವುದು ಮತ್ತು ಯಾರ ಮೇಲೂ ಅನ್ಯಾಯವಾಗದು.'' (ಪವಿತ್ರ ಕುರ್‌ಆನ್, 3:25)**

**''ಮತ್ತು ಕರ್ಮಪತ್ರವು ಮುಂದಿರಿಸಲ್ಪಡುವುದು. ಆಗ ಅಪರಾಧಿಗಳು ತಮ್ಮ ಜೀವನ ಗ್ರಂಥದಲ್ಲಿ ಅಡಕವಾಗಿರುವುದರ ಬಗ್ಗೆ ಭಯಭೀತರಾಗಿ, 'ಅಯ್ಯೋ ನಮ್ಮ ದುರ್ಗತಿಯೇ, ಇದೆಂತಹ ಗ್ರಂಥ! ನಮ್ಮ ಯಾವುದೇ ಚಿಕ್ಕ ಹಾಗೂ ದೊಡ್ಡ ಕೃತ್ಯವು ಇದರಲ್ಲಿ ಲಿಖಿತಗೊಳ್ಳದೆ ಬಿಟ್ಟು ಹೋಗಿಲ್ಲವಲ್ಲಾ' ಎಂದು ಹೇಳುತ್ತಿರುವುದನ್ನು ನೀವು ಕಾಣುವಿರಿ. ಅವರು ಏನೆಲ್ಲ**

ಮಾಡಿದ್ದರೋ ಅವೆಲ್ಲವನ್ನೂ ತಮ್ಮ ಮುಂದೆ ಕಾಣುವರು ಮತ್ತು ನಿಮ್ಮ ಪ್ರಭು ಯಾರ ಮೇಲೂ ಕಿಂಚಿತ್ತೂ ಅಕ್ರಮವೆಸಗಲಾರನು.'' (ಪವಿತ್ರ ಕುರ್‌ಆನ್, 18:49)

''ನೀವು ಅಲ್ಲಾಹನ ಕಡೆಗೆ ಮರಳಿಸಲ್ಪಡುವ ದಿನದ ಅವಮಾನ ಹಾಗೂ ಕಷ್ಟಗಳಿಂದ ಭಯಪಡಿರಿ. ಅಲ್ಲಿ ಪ್ರತಿಯೊಬ್ಬನಿಗೂ ಅವನು ಗಳಿಸಿದ ಪುಣ್ಯ ಅಥವಾ ಪಾಪಗಳ ಸರ್ವ ಸಂಪೂರ್ಣ ಪ್ರತಿಫಲ ಸಿಗುವುದು ಮತ್ತು ಯಾರ ಮೇಲೂ ಎಷ್ಟು ಮಾತ್ರಕ್ಕೂ ಅನ್ಯಾಯವಾಗಲಾರದು.'' (ಪವಿತ್ರ ಕುರ್‌ಆನ್, 2:281)

''ಅವನ ಬಾಯಿಯಿಂದ ಹೊರಡುವ ಯಾವ ಮಾತು ಕೂಡಾ, ಸದಾ ಸನ್ನದ್ಧನಿರುವ ಒಬ್ಬ ಕಾವಲುಗಾರನಿಂದ ದಾಖಲಿಸಲ್ಪಡದೆ ಇರುವುದಿಲ್ಲ.''(ಪವಿತ್ರ ಕುರ್‌ಆನ್, 50:18)

''ನಿಮ್ಮಲ್ಲಾರಾದರೂ ಸ್ವರವೆತ್ತಿ ಮಾತಾಡಲಿ ಅಥವಾ ಮೆಲುದನಿಯಿಂದ ಮಾತಾಡಲಿ, ನಿಶಾಂಧಕಾರದಲ್ಲಿ ಅಡಗಿರಲಿ ಅಥವಾ ಹಗಲಿನ ಬೆಳಕಿನಲ್ಲಿ ಚಲಿಸುತ್ತಿರಲಿ ಅವನ ಮಟ್ಟಿಗೆ ಎಲ್ಲವೂ ಸರಿಸಮಾನ.'' (ಪವಿತ್ರ ಕುರ್‌ಆನ್, 13:10)

''ಕಟ್ಟಕಡೆಗೆ ಪ್ರತಿಯೊಬ್ಬನಿಗೂ ಮರಣಹೊಂದಬೇಕಾಗಿದೆ ಮತ್ತು ನೀವೆಲ್ಲರೂ ನಿಮ್ಮ ನಿಮ್ಮ ಪ್ರತಿಫಲವನ್ನು ಪುನರುತ್ಥಾನ ದಿನದಂದು ಪಡೆಯುವವರಿದ್ದೀರಿ. ಅಲ್ಲಿ ನರಕಾಗ್ನಿಯಿಂದ ರಕ್ಷೆ ಹೊಂದುವವನೂ ಸ್ವರ್ಗದಲ್ಲಿ ಪ್ರವೇಶ ಪಡೆಯುವವನೂ ನಿಜವಾದ ಕೃತಾರ್ಥನು. ಈ ಲೋಕದ ಜೀವನವಂತೂ ಕೇವಲ ಭ್ರಾಮಕ ಸಂಪತ್ತಾಗಿದೆ.''(ಪವಿತ್ರ ಕುರ್‌ಆನ್, 3:185)

''ನಾವು ಅವನ ಎಲುಬುಗಳನ್ನು ಒಟ್ಟುಗೂಡಿಸಲಾರೆವೆಂದು ಮಾನವನು ಭಾವಿಸುತ್ತಿರುವನೇ?ಯಾಕಿಲ್ಲ? ನಾವಂತು ಅವನ ಬೆರಳುಗಳ ತುದಿಗಳನ್ನು ಕೂಡಾ ಸರಿಯಾಗಿ ರಚಿಸಲು ಶಕ್ತರಾಗಿದ್ದೇವೆ. ಆದರೆ ಮಾನವನು ಮುಂದೆಯೂ ತಾನು ದುಷ್ಕರ್ಮಗಳನ್ನು ಮಾಡುತ್ತಿರಬೇಕೆಂದು ಇಚ್ಛಿಸುತ್ತಾನೆ.''(ಪವಿತ್ರ ಕುರ್‌ಆನ್, 75:3-5)

## ಪ್ರವಾದಿ ವಚನಗಳಲ್ಲಿ ಪರಲೋಕ ಜೀವನ

ಇಸ್ಲಾಮಿನ ಪಾರಿಭಾಷಿಕದಲ್ಲಿ ದೇವ ಸಂದೇಶವಾಹಕರಾದ ಮುಹಮ್ಮದ್‌ರ(ಸ) ಪವಿತ್ರ ಜೀವನ, ಅವರ ಆಚರಣೆ ಹಾಗೂ ರೀತಿಯನ್ನು ಹದೀಸ್ ಎಂದು ಹೇಳಲಾಗುತ್ತದೆ. ಪ್ರವಾದಿಯವರಿಗೆ(ಸ) ಆಪ್ತರಾಗಿದ್ದ ವಿಶ್ವಸ್ಥರಾದ ಸ್ತ್ರೀ-ಪುರುಷರು ಮತ್ತು ವರದಿಗಾರರಿಂದ ಆರಂಭ ಕಾಲದಲ್ಲಿಯೇ ಇದನ್ನು ತಯಾರಿಸಲಾಗಿತ್ತು. ಪ್ರವಾದಿ ಮುಹಮ್ಮದ್‌ರ(ಸ) ಸಂಪೂರ್ಣ ಹೇಳಿಕೆಗಳು, ಅವರ ಕಾರ್ಯವಿಧಾನ, ಆಚರಣೆಗಳು, ಆದೇಶ ನಿರ್ದೇಶನಗಳು, ಪವಿತ್ರ ಕುರ್‌ಆನಿನ ವಚನಗಳ ಕುರಿತು ಪ್ರವಾದಿಯವರು(ಸ) ನೀಡಿದ ವ್ಯಾಖ್ಯಾನ ಸಾವಿರಾರು ಸಂಖ್ಯೆಯಲ್ಲಿ ಪ್ರಾಚೀನ ಕಾಲದಿಂದಲೇ ಅಕ್ಷರಗಳ ರೂಪದಲ್ಲಿ ಸಂಕಲಿತವಾಗಿದೆ

ಮತ್ತು ಲಭ್ಯವಿದೆ. ಇಂದು ಅದು ಜಗತ್ತಿನ ಅನೇಕ ಭಾಷೆಗಳಿಗೆ ಭಾಷಾಂತರಗೊಂಡಿದೆ ಮತ್ತು ಎಲ್ಲೆಡೆಯೂ ಲಭ್ಯವಿದೆ.

ಪ್ರವಾದಿ ಮುಹಮ್ಮದರು(ಸ) ಪರಲೋಕ, ಸ್ವರ್ಗ-ನರಕಕ್ಕೆ ಸಂಬಂಧಿಸಿ ನೀಡಿರುವ ಅನೇಕಾನೇಕ ಹೇಳಿಕೆಗಳ ಪೈಕಿ ಕೆಲವು ಈ ಕೆಳಗಿನಂತಿವೆ;

1. ಕಿಯಾಮತ್‌ನ ದಿನ (ಅಂತಿಮ ನ್ಯಾಯ ತೀರ್ಮಾನದ ದಿನ) ದಾಸ ದೇವನ ಮುಂದೆ ಹಾಜರಾಗುವನು. ಅವನು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸದೆ ಒಂದು ಹೆಜ್ಜೆಯನ್ನೂ ಮುಂದಿಡಲಾರನು.

-ನಿನ್ನ ಆಯುಷ್ಯವನ್ನು ಹೇಗೆ ಕಳೆದೆ? (ಒಳ್ಳೆಯ ಕೆಲಸ, ದೇವನ ಆಜ್ಞಾಪಾಲನೆ ಯಲ್ಲಿಯೇ ಅಥವಾ ಅದಕ್ಕೆ ವಿರುದ್ಧವಾಗಿಯೇ?)

-ನಿನ್ನ ಯೌವನವನ್ನು ಹೇಗೆ ಕಳೆದೆ? (ದೇವಾಜ್ಞೆಯ ಪಾಲನೆಯಲ್ಲೋ ಅಥವಾ ಅದಕ್ಕೆ ವಿರುದ್ಧವಾಗಿಯೋ)

- ಸಂಪತ್ತನ್ನು ಹೇಗೆ ಸಂಪಾದಿಸಿದೆ? (ಧರ್ಮಬದ್ಧ ರೀತಿಯಲ್ಲೋ ಅಥವಾ ಧರ್ಮ ನಿಷಿದ್ಧ ರೀತಿಯಲ್ಲೋ)

- ಸಂಪತ್ತನ್ನು ಹೇಗೆ ಖರ್ಚು ಮಾಡಿದೆ? (ಸತ್ಕರ್ಮಕ್ಕೋ ಅಥವಾ ದುಷ್ಕರ್ಮಕ್ಕೋ)

- ನೀನು ಗಳಿಸಿದ ಜ್ಞಾನದಂತೆ ಎಷು ಕೆಲಸ ಮಾಡಿದೆ? (ತಿರ್ಮಿದಿ)

2. ಯಾವುದೇ ರೀತಿಯ ಸಂಪತ್ತು ಇಲ್ಲದವರನ್ನು ದರಿದ್ರ ಅಥವಾ ದಿವಾಳಿಕೋರ ಎನ್ನಲಾಗುತ್ತದೆ. ಆದರೆ ನನ್ನ ಸಮುದಾಯದ ದಿವಾಳಿಕೋರ ಯಾರೆಂದರೆ, ಅವನು ನಮಾಝ್, ಉಪವಾಸ ವ್ರತ, ಝಕಾತ್‌ಗಳಂತಹ ಸತ್ಕರ್ಮಗಳ ಭಂಡಾರವನ್ನೇ ತೆಗೆದುಕೊಂಡು ಪರಲೋಕದಲ್ಲಿ ದೇವ ನ್ಯಾಯಾಲಯದಲ್ಲಿ ಹಾಜರಾಗುತ್ತಾನೆ. ಆದರೆ ಅವನು ಒಬ್ಬನನ್ನು ತೆಗಳಿರುತ್ತಾನೆ, ಇನ್ನೊಬ್ಬನ ಮೇಲೆ ಅಪವಾದ ಹೊರಿಸಿರುತ್ತಾನೆ. ಮತ್ತೊಬ್ಬನ ಹಣ ಕಸಿದಿರುತ್ತಾನೆ. ತರುವಾಯ ಅವನಿಂದ ಅನ್ಯಾಯಕ್ಕೊಳಗಾದವರಿಗೆಲ್ಲ ಆತನ ಸತ್ಕರ್ಮಗಳನ್ನು ನೀಡಲಾಗುವುದು. ಅವನ ಸತ್ಕರ್ಮಗಳು ಬೇಗನೇ ಮುಗಿದು ಹೋದರೆ, ಅವರ ಪಾಪಗಳನ್ನು ಆತನ ಮೇಲೆ ಹೊರಿಸಲಾಗುವುದು. ಕೊನೆಗೆ ದೇವಚರರೊಂದಿಗೆ ಅವನನ್ನು ನರಕಕ್ಕೆ ಎಸೆಯಲು ಆದೇಶಿಸಲಾಗುವುದು. ಇಂತಹ ವ್ಯಕ್ತಿಯೇ ನನ್ನ ಸಮುದಾಯದ ದಿವಾಳಿಕೋರ.

3. ಯಾರು ತನ್ನ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳಿಗೆ ಪ್ರಾಶಸ್ತ್ಯ ನೀಡಲಿಲ್ಲವೋ ಯಾರು ಹೆಣ್ಣು ಮಕ್ಕಳನ್ನು ಹತ್ಯೆ ಮಾಡಲಿಲ್ಲವೋ ಅದಕ್ಕೆ ಬದಲಾಗಿ ಹೆಣ್ಣು ಮಕ್ಕಳೊಂದಿಗೆ ಸ್ನೇಹಾದರದೊಂದಿಗೆ ವರ್ತಿಸಿ, ಅವರ ಪಾಲನೆ ಪೋಷಣೆ ಮಾಡಿ, ಉತ್ತಮ ಶಿಕ್ಷಣ, ಒಳ್ಳೆಯ ತರಬೇತಿಯನ್ನು ನೀಡಿ ಯೋಗ್ಯ ವರರೊಂದಿಗೆ ಅವಳ ವಿವಾಹ ಮಾಡಿ

ಕೊಡುತ್ತಾನೋ ಅಂತಹ ವ್ಯಕ್ತಿ ಮತ್ತು ನಾನು ಸ್ವರ್ಗದಲ್ಲಿ ಈ ರೀತಿ ಇರುವೆವೆಂದು ಪ್ರವಾದಿ ಮುಹಮ್ಮದರು(ಸ) ತಮ್ಮ ಕೈಯ ಎರಡು ಬೆರಳುಗಳನ್ನು ಹತ್ತಿರ ಮಾಡಿ ತೋರಿಸಿದರು.

4. ಯಾರ ಬಳಿ ವೃದ್ಧರಾದ ಮಾತಾಪಿತರಿದ್ದು ಅಥವಾ ಅವರ ಪೈಕಿ ಯಾರಾದರೊಬ್ಬರಿದ್ದು ಅವರ ಸೇವೆಯನ್ನು ಮಾಡಿ ಸ್ವರ್ಗವನ್ನು ಗಳಿಸಲು ಸಾಧ್ಯವಾಗಲಿಲ್ಲವೋ ಅಂತಹ ವ್ಯಕ್ತಿಯನ್ನು ಅಲ್ಲಾಹನು ಶಪಿಸಿರುತ್ತಾನೆ.

## ಪರಲೋಕ ವಿಶ್ವಾಸದಿಂದ ಉಂಟಾಗುವ ವ್ಯಾವಹಾರಿಕ ಪರಿಣಾಮಗಳು

ಮರಣಾನಂತರದ ಪರಲೋಕ ಜೀವನದ ಬಗ್ಗೆ ಇಸ್ಲಾಮಿನ ವಿಶ್ವಾಸವು ಕೇವಲ ಅಸ್ಪಷ್ಟ ಅಥವಾ ದಾರ್ಶನಿಕ ಕಲ್ಪನೆಯಲ್ಲ, ಇದನ್ನು ಇಸ್ಲಾಮ್ 'ದೃಢ ವಿಶ್ವಾಸ'ವಾಗಿ ಪರಿಗಣಿಸಿದೆ. ಈ ವಿಶ್ವಾಸವು ವ್ಯಕ್ತಿ ಮತ್ತು ಸಮಾಜದ ಮೇಲೆ ಯಾವ ರೀತಿಯ ಪರಿಣಾಮವನ್ನುಂಟು ಮಾಡಿತೆಂದರೆ ಅದರಿಂದ ಇತಿಹಾಸದಲ್ಲಿ ಆಮೂಲಾಗ್ರ ಬದಲಾವಣೆ ಉಂಟಾಯಿತು. ಇದರಿಂದುಂಟಾದ ವ್ಯಾವಹಾರಿಕ ಪ್ರಭಾವ ಮತ್ತು ಪರಿಣಾಮಗಳ ಕುರಿತು ಕೆಲವನ್ನು ಬಹಳ ಸಂಕ್ಷಿಪ್ತವಾಗಿ ಈ ಕೆಳಗೆ ನೀಡಲಾಗಿದೆ.

- ಅರಬರು ಶರಾಬನ್ನು ನೀರಿನಂತೆ ಕುಡಿಯುತ್ತಿದ್ದರು. (ಇಸ್ಲಾಮಿಗಿಂತ ಮೊದಲು ಅರಬ್ ರಾಷ್ಟ್ರದಲ್ಲಿದ್ದ ಅರಬಿ ಸಾಹಿತ್ಯದಲ್ಲಿ ಶರಾಬಿನ ಇನ್ನೂರು ವಿಧಗಳ ಬಗ್ಗೆ ಉಲ್ಲೇಖವಿದೆ.) ಅವರು ಇಸ್ಲಾಮನ್ನು ಸ್ವೀಕರಿಸಿದ ಬಳಿಕ, ಪ್ರವಾದಿ ಮುಹಮ್ಮದರು(ಸ) ಶರಾಬು ಕುಡಿಯಬಾರದು, ಅದನ್ನು ನಿಷೇಧಿಸಲಾಗಿದೆಯೆಂದು ಪವಿತ್ರ ಕುರ್‌ಆನಿನಲ್ಲಿ ಆದೇಶ ಬಂದಿದೆ ಎಂದು ಆದೇಶಿಸಿದಾಗ (ಅರ್ಥಾತ್ ಇನ್ನು ಮುಂದೆ ಯಾರಾದರೂ ಶರಾಬಿನ ಒಂದು ಹನಿ ಅಥವಾ ಗುಟುಕನ್ನು ಕುಡಿದರೂ ಅವನಿಗೆ ನಾಳೆ ಪರಲೋಕದಲ್ಲಿ ನರಕ ಶಿಕ್ಷೆಯನ್ನು ಅನುಭವಿಸಬೇಕಾಗಿ ಬರುವುದು) ಅದನ್ನು ಕೇಳುತ್ತಿದ್ದಂತೆಯೇ ಜನರು ಸ್ವತಃ ಶರಾಬು ತುಂಬಿದ ಪಾತ್ರೆಗಳನ್ನು ಒಡೆದು ಹಾಕಿದರು. ಬಾಯಿಯವರೆಗೆ ತಲುಪಿದ್ದ ಶರಾಬಿನ ಬಾಟಲಿಗಳನ್ನು ಎಸೆದು ಬಿಟ್ಟರು. ಆಗ ತಾನೇ ಹೊಟ್ಟೆ ಸೇರಿದ್ದ ಶರಾಬನ್ನು ಬಾಯಿಯೊಳಗೆ ಬೆರಳು ಹಾಕಿ ವಾಂತಿ ಮಾಡಿಕೊಂಡರು. ಶರಾಬು ಕುಡಿಯುತ್ತಿದ್ದ ಸ್ಥಳದಲ್ಲಿ ಈ ಘೋಷಣೆಯನ್ನು ಕೇಳಿದ ಬಳಿಕವೂ ಕುಡಿಯುವುದನ್ನು ಮುಂದುವರಿಸಿದ ವ್ಯಕ್ತಿಗಳನ್ನು ಉಳಿದವರು ಗುದ್ದು ನೀಡಿ, ಹೊಡೆದು ಬಡಿದು ಬಿಟ್ಟರು.

- ''ಹೆಣ್ಣು ಮಗು ಜನಿಸಿದ ವಿಷಯ ಕೇಳಿದರೆ ಅವರ ಮುಖವು ಕಳೆಗುಂದುತ್ತಿತ್ತು.'' **(ಪವಿತ್ರ ಕುರ್‌ಆನ್, 16:58)** ವಿಭಿನ್ನ ಕಾರಣಗಳಿಗಾಗಿ ಹೆಣ್ಣು ಮಗುವನ್ನು ಜೀವಂತ

ದಫನಗೊಳಿಸುವ ಪೈಶಾಚಿಕ ಕ್ರೂರವರ್ತನೆ ಚಾಲ್ತಿಯಲ್ಲಿತ್ತು. ಹೆಣ್ಣು ಮಗುವಿನ ಹತ್ಯೆಯನ್ನು ಖಂಡಿಸಿ ದೇವವಾಣಿಯು ಅವತೀರ್ಣಗೊಂಡಿತು. (ಪವಿತ್ರ ಕುರ್‌ಆನ್, 81:8-9) ದೇವ ಸಂದೇಶವಾಹಕರು ಕೂಡಾ ಈ ಬಗ್ಗೆ ಜನರನ್ನು ಎಚ್ಚರಿಸಿದರು. ಇದಾದ ಬಳಿಕ ಹೆಣ್ಣು ಮಗುವಿನ ಜನನದಿಂದ ಜನರ ಮುಖದಲ್ಲಿ ಸಂತೋಷ ಗೋಚರಿಸಲಾರಂಭಿಸಿತು. ಹೆಣ್ಣು ಮಕ್ಕಳು ಸ್ವರ್ಗ ಪ್ರಾಪ್ತಿಗೆ ಮಾಧ್ಯಮವಾಗುತ್ತಾರೆ ಎಂದು ಅರಿತು ಹೆತ್ತವರು ಪ್ರಫುಲ್ಲರಾಗಿ ಪ್ರಸನ್ನವದನರಾದರು. ಹೆಣ್ಣು ಮಕ್ಕಳ ಹತ್ಯೆಯು ಇಸ್ಲಾಮೀ ಸಮಾಜದಲ್ಲಿ ಸಂಪೂರ್ಣ ಕೊನೆಗೊಂಡಿತು.

-ಮಾತಾಪಿತರ ವಿಶೇಷತೆ: ವೃದ್ಧರಾದ, ಬಲಹೀನರಾದ ಮಾತಾಪಿತರ ಪಾಲನೆ-ಪೋಷಣೆ ಮಾಡಲು, ಗೌರವಾದರಗಳೊಂದಿಗೆ ಅವರೊಂದಿಗೆ ವ್ಯವಹರಿಸಲು ಅವರ ಸೇವೆ ಮಾಡಲು ಹಾಗೂ ಅವರ ಆಜ್ಞಾಪಾಲನೆಯಲ್ಲಿ ಮಕ್ಕಳು ನಿರತರಾದರು. ಏಕೆಂದರೆ ಇದು ಪರಲೋಕದಲ್ಲಿ ಸ್ವರ್ಗ ಪ್ರಾಪ್ತಿಗೆ ಕಾರಣವಾಗುತ್ತದೆ ಎಂಬುದು ಅವರಿಗೆ ತಿಳಿದಿತ್ತು.

ಮರಣಾನಂತರ ಜೀವನದ (ಪರಲೋಕ, ದೇವ ನ್ಯಾಯಾಲಯ, ಕರ್ಮಗಳಿಗೆ ಸಂಪೂರ್ಣ ಪ್ರತಿಫಲ, ಸ್ವರ್ಗ ಗಳಿಸಬೇಕೆಂಬ ಉತ್ಕಟ ಇಚ್ಛೆ, ನರಕದಿಂದ ದೂರ ಉಳಿಯುವ ಚಿಂತೆ) ಇಸ್ಲಾಮೀ ವಿಶ್ವಾಸವು ಲೌಕಿಕ ಜೀವನದಲ್ಲಿ ಯಾವುದನ್ನೂ ಬದಲಾಯಿಸದೆ ಬಿಡಲಿಲ್ಲ. ಇತಿಹಾಸವು ಜಗತ್ತಿನ ಅತ್ಯಂತ ಅಸಭ್ಯ, ಮೂರ್ಖರಾದ, ಅಶಿಕ್ಷಿತ, ಕುಡುಕ, ದುಷ್ಟ ದುರಾಚಾರಿ, ನಿರಕ್ಷರಿ ಜನಾಂಗವನ್ನು (ಇಸ್ಲಾಮಿನ ಪ್ರವೇಶದ ನಂತರ) ಸದಾಚಾರಿ, ದೇವ ವಿಶ್ವಾಸಿ, ಸಭ್ಯ, ದಯಾಪರ, ಕ್ಷಮಾಶೀಲ, ಜನಸೇವಕ, ತ್ಯಾಗ, ಸಹನೆ, ಜ್ಞಾನ-ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಶ್ರೇಷ್ಠತೆ ಮತ್ತು ಉತ್ಕೃಷ್ಟತೆಯ ಪರಾಕಾಷ್ಠೆಯನ್ನು ತಲುಪುವಂತೆ ಮಾಡಿತು. ಈ ಬದಲಾವಣೆ, ಈ ಸಂಪೂರ್ಣ ಕ್ರಾಂತಿ ತರುವುದರಲ್ಲಿ ಇಸ್ಲಾಮಿನ ಮೂಲಭೂತ ವಿಶ್ವಾಸಗಳಾದ ಏಕದೇವ ವಿಶ್ವಾಸದ ಜೊತೆಗೆ ಪರಲೋಕದ ಸ್ಪಷ್ಟ ಪರಿಕಲ್ಪನೆಯೂ ಪ್ರಮುಖವಾದ ಪಾತ್ರವನ್ನು ವಹಿಸಿತ್ತು.

ನಾವು ಉತ್ತಮ ಮನುಷ್ಯರಾಗಲು ಬಯಸುವುದಿಲ್ಲವೇ? ಒಳ್ಳೆಯ ಕುಟುಂಬ, ಒಳ್ಳೆಯ ಸಾಮಾಜಿಕ ವ್ಯವಸ್ಥೆಯುಂಟಾಗಬೇಕೆಂಬ ಹಂಬಲ, ಅಭಿಲಾಷೆ ಇಟ್ಟುಕೊಳ್ಳುವುದಿಲ್ಲವೇ? ದುರಾಚಾರ, ಅತ್ಯಾಚಾರ, ಭ್ರಷ್ಟಾಚಾರ, ಅನ್ಯಾಯ, ಅಶಾಂತಿ, ಅಪರಾಧ, ಹೆಣ್ಣು ಭ್ರೂಣ ಹತ್ಯೆ ಇತ್ಯಾದಿಗಳು ನಿರ್ಮೂಲನವಾಗಬೇಕೆಂದು ಬಯಸುವುದಿಲ್ಲವೇ? ನಿಸ್ಸಂಶಯವಾಗಿಯೂ ನಮ್ಮಲ್ಲಿ ಪ್ರತಿಯೊಬ್ಬರೂ ಇವೆಲ್ಲವನ್ನೂ

ಬಯಸುತ್ತೇವೆ. ಹಾಗಾದರೆ ಬನ್ನಿ ಇಸ್ಲಾಮಿನ ಮರಣಾನಂತರ ಜೀವನದ ಪರಿಕಲ್ಪನೆಯನ್ನು ಅರಿಯಿರಿ. ಸ್ವಲ್ಪವೂ ಸಮಯ ವ್ಯರ್ಥಗೊಳಿಸದೆ 'ಪರಲೋಕ ಜೀವನಕ್ಕೆ ಇಂದಿನಿಂದಲೇ ಸಿದ್ಧತೆ ನಡೆಸಿ' ದೇವನು ನಮಗೆ ಸಹಾಯ ಮಾಡಲಿ ಮತ್ತು ನಮಗೆ ಸನ್ಮಾರ್ಗವನ್ನು ತೋರಿಸಲಿ.

ಅಲ್ಲಾಹನು ಹೇಳುತ್ತಾನೆ.

''ಸ್ಪಷ್ಟವಾಗಿ(ಹೀಗೆ) ಹೇಳಿಬಿಡಿರಿ ಇದು ನಿಮ್ಮ ಪ್ರಭುವಿನ ಕಡೆಯಿಂದ ಬಂದ ಸತ್ಯ. ಇಷ್ಟವಿದ್ದವರು ಸ್ವೀಕರಿಸಿಕೊಳ್ಳಲಿ, ಇಷ್ಟವಿದ್ದವರು ನಿರಾಕರಿಸಲಿ. (ನಿರಾಕರಿಸುವ) ಅಕ್ರಮಿಗಳಿಗೆ ನಾವು ಒಂದು ಅಗ್ನಿಯನ್ನು ಸಿದ್ಧಗೊಳಿಸಿರುತ್ತೇವೆ. ಅದರ ಜ್ವಾಲೆಗಳು ಅವರನ್ನು ಆವರಿಸಿಕೊಂಡಿವೆ. ಅಲ್ಲಿ ಅವರು ನೀರು ಬೇಕೆಂದು ಕೇಳಿದಾಗ ಎಣ್ಣೆಯ ಮಡ್ಡಿಯಂತಹ ಹಾಗೂ ಬಾಯಿಯನ್ನು ಸುಟ್ಟು ಹಾಕುವಂತಹ ನೀರಿನಿಂದ ಅವರನ್ನು ಸತ್ಕರಿಸಲಾಗುವುದು. ಅತ್ಯಂತ ಕೆಟ್ಟ ಪೇಯ ಮತ್ತು ಅತಿಕೆಟ್ಟ ವಿಶ್ರಾಂತಿ ಗೃಹ. ಇನ್ನು ಸತ್ಯವಿಶ್ವಾಸವನ್ನು ಸ್ವೀಕರಿಸಿ ಸತ್ಕರ್ಮವೆಸಗುವವರ ವಿಷಯ. ನಾವು ಖಂಡಿತವಾಗಿಯೂ ಸತ್ಕರ್ಮಿಗಳ ಸತ್ಫಲವನ್ನು ವ್ಯರ್ಥಗೊಳಿಸುವುದಿಲ್ಲ, ಅವರಿಗಾಗಿ ಸದಾ ಹಸಿರಾದ ಸ್ವರ್ಗೋದ್ಯಾನಗಳಿವೆ. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅಲ್ಲಿ ಅವರು ಬಂಗಾರದ ಕಂಕಣಗಳಿಂದ ಶೃಂಗರಿಸಲ್ಪಡುವರು. ತೆಳ್ಳಗಿನ ರೇಶ್ಮೆ, ಜರತಾರಿ ಹಸಿರು ಬಟ್ಟೆಗಳನ್ನು ಧರಿಸುವರು ಮತ್ತು ಉನ್ನತ ಪೀಠಗಳ ಮೇಲೆ ದಿಂಬುಗಳಿಗೆ ಒರಗಿ ಕುಳಿತಿರುವರು. ಅತ್ಯುತ್ತಮ ಪ್ರತಿಫಲ ಮತ್ತು ಅತ್ಯುನ್ನತ ಮಟ್ಟದ ವಿಶ್ರಾಂತಿಧಾಮು!'' (ಪವಿತ್ರ ಕುರ್‌ಆನ್, 18:29-31)

ಸೂಚನೆ : ಪರಲೋಕ ಜೀವನದ ವಿಶ್ವಾಸವನ್ನು ಅರಿಯಲು ಪವಿತ್ರ ಕುರ್‌ಆನನ್ನು ಅಧ್ಯಯನ ಮಾಡುವುದು ಅತ್ಯವಶ್ಯಕವಾಗಿದೆ.

